# INSTRUCTIVE PARABLES

# ದೃಷ್ಟಾಂತದರ್ಪಣವು

MANGALORE

PUBLISHED BY C. STOLZ

BASEL MISSION BOOK & TRACT DEPOSITORY

1870

ಕ್ರಯ ೬ ಪೈ.

# INSTRUCTIVE PARABLES



# ದೃಷ್ಟಾಂತದರ್ಪಣವು



MANGALORE

PRINTED BY STOLZ & REUTHER, BASEL MISSION PRESS

1870

# ದೃಷ್ಟಾಂತದರ್ಪಣವು.

## ೧. ಉಪಮೆ.

"ಮಾಡುವವನೂ ಮಾಡಿಸುವವನೂ ದೇವರೇ."

ಸುಬೋಧಿ ಎಂಬ ಒಬ್ಬ ಗೃಹಸ್ಥನಿಗೆ ಸುಗುಣಿ ಎಂಬ ಒಬ್ಬನೇ ಮಗನಿದ್ದನು. ಅವನು ಆ ಮಗನಿಗೆ—ನೀನು ಸುಳ್ಳು ಹೇಳ ಬಾರದು, ಕಳ್ಳತನ ಮಾಡ ಬಾರದು, ಯಾರನ್ನಾದರೂ ಹೊಡಿಯ ಬಾರದು, ಒಬ್ಬರ ಒಡವೆಯನ್ನು ಆಶಿಸ ಬಾರದು ಎಂಬ ಮುಂತಾದ ಅನೇಕ ತರದ ಸುಬೋಧೆಯನ್ನು ನಿತ್ಯ ಬೋಧಿಸುತ್ತಾ, ತಾನೂ ಅದೇ ಪ್ರಕಾರ ನಡ ಕೊಳ್ಳುತ್ತಾ ಇದ್ದನು. ಈ ಪ್ರಕಾರ ತನ್ನ ಮಗನನ್ನು ಅನ್ನ ವಸ್ತ್ರಾದಿಗಳನ್ನು ಕೊಟ್ಟು ಚನ್ನಾಗಿ ಪೋಷಿಸಿ, ಅತಿ ಪ್ರೀತಿಯಿಂದ ಶಿಕ್ಷಾಭ್ಯಾಸದಲ್ಲಿ ಬೆಳಿಸಿದನು. ಹೀಗಿರುವಾಗ್ಯೆ ಆ ಹುಡುಗನು ತನ್ನ ತಂದೆಯ ಉತ್ತಮ ಬೋಧನೆಯನ್ನು ಮನಸ್ಸಿಗೆ ತಂದು, ತಂದೆಯು ಒಳ್ಳೆಯವನೂ ಪ್ರೀತಿಯುಳ್ಳವನೂ

ಎಂದು ತಿಳಿದು, ಆತನ ಬೋಧನೆಗೆ ಅನುಸರಿಸಿ ನಡಿಯು ತ್ತಾ ಇದ್ದನು. ಆದರೆ ಆ ಊರಿನ ಜನರು ಬಹು ದುಷ್ಟರಾಗಿದ್ದದರಿಂದ, ಅಸಹ್ಯವಾದ ದುಷ್ಕರ್ಮಗಳನ್ನು ನಡಿಸಿ, ಅನೀತಿಯಲ್ಲಿ ಮುಳುಗಿದವರಾಗಿದ್ದರು. ಆದ ಕಾರಣ ಅವರು, ತಮ್ಮ ಊರಿನಲ್ಲಿ ಇಂಥಾ ಸದ್ಗುಣವುಳ್ಳ ಮನುಷ್ಯನಿದ್ದರೆ, ತಮ್ಮ ದುಷ್ಕರ್ಮಗಳಿಗೆ ಸಾಕ್ಷಿಯಾಗಿರುವನೆಂದು ಭಾವಿಸಿ, ಅವನನ್ನು ಬಹಳ ದ್ವೇಷಿಸಿ, ತಮ್ಮ ಊರಿನಿಂದ ಓಡಿಸ ಬೇಕೆಂಬ ದುರಾಲೋಚನೆ ಮಾಡಿ, ತಮ್ಮ ಅಪರಾಧಗಳನ್ನು ಅವನ ಮೇಲೆ ಸ್ಥಾಪಿಸಿ, ಅವನಿಗೆ ನಾನಾ ಪ್ರಕಾರದ ಉಪದ್ರಗಳನ್ನು ಕೊಡಲಾರಂಭಿಸಿದರು. ಹ್ಯಾಗಂದರೆ—ಯಾರಾದರೂ ರಾತ್ರಿಯಲ್ಲಿ ಕಳ್ಳತನ ಮಾಡಿದರೆ, ಅಥವಾ ಮನೆ ಸುಲಿಗೆ ಮಾಡಿದರೆ, ಅಥವಾ ನರಹತ್ಯ ಮಾಡಿದರೆ, ಅಂಥಾ ಅಪರಾಧಗಳನ್ನೆಲ್ಲಾ ಆ ಸುಬೋಧಿಯ ಮೇಲೆ ಹೊರಿಸುವರು. ಇದಲ್ಲದೆ ಯಾರಾದರೂ ತಮ್ಮ ಮೋಸಕೃತ್ಯದಲ್ಲಿ ಇಲ್ಲವೇ ಕಳ್ಳತನದಲ್ಲಿ ಶಿಕ್ಕಿ ಬಿದ್ದು ಅವರ ಮೇಲೆ ತಪ್ಪು ಸ್ಥಾಪಿತವಾದರೆ, ಅವರು ತಮ್ಮನ್ನು ತಪ್ಪಿಸಿ ಕೊಳ್ಳಲಿಕ್ಕಾಗಿ, ಆ ಕೃತ್ಯವನ್ನು ಮಾಡುವ ಹಾಗೆ ತಮಗೆ ಸುಬೋಧಿಯು ಹೇಳಿಕೊಟ್ಟು ತಮ್ಮನ್ನು ಪ್ರೇರೇಪಿಸಿದನೆಂದು ಹೇಳುವರು. ಮ

ತ್ತು ಯಾವನಾದರೂ ಒಬ್ಬ ಅಪರಾಧಿಯನ್ನು ವಿಚಾರಣೆ ಆ ಗುವಾಗ, ಅವನು ತನಗೆ ಸುಬೋಧಿಯು ಸಹಾಯಕನಾ ಗಿದ್ದನೆಂದು ಹೇಳುವನು. ಇಂಥಾ ಅಸಹ್ಯಕರವಾದ ಹೇ ಳಿಕೆಯಿಂದ ಸುಬೋಧಿಯ ಮಗನಿಗೆ ಬಹಳ ದುಃಖ ಉಂ ಟಾಗುತ್ತಿತ್ತು. ಇದಲ್ಲದೆ ಆ ಹುಡುಗನನ್ನು ಕಂಡ ಕಂಡಲ್ಲಿ ಜನರು ಅವನಿಗೆ—ನಿನ್ನ ತಂದೆಯು ಕಳ್ಳನೂ ಸುಳ್ಳುಗಾರನೂ ಮೋಸಗಾರನೂ ಪಟಿಂಗರ ಗೆಳೆಯನೂ ಎಂದು, ಈ ಪ್ರಕಾ ರ ನಾನಾ ವಿಧದ ನಿಂದೇ ಮಾತುಗಳಿಂದ ಅವನಿಗೆ ಮನೋ ವೇಧನೆ ಹುಟ್ಟಿಸುತ್ತಿದ್ದರು. ಹೀಗೆಯೇ ಯಾವದೊಂದು ನ ರಹತ್ಯ ಕೃತ್ಯವು ಸಂಭವಿಸಿದರೆ, ಆ ಜನರು—ಇದು ಆ ಸು ಬೋಧಿಯು ಮಾಡಿರ ಬೇಕು, ಅಥವಾ ಅವನು ಮಾಡಿಸಿರ ಬೇಕು ಎಂದು ಅವನ ಮೇಲೆ ದೋಷವಿಟ್ಟು, ನಿಂದಿಸಿ, ಅವ ನ ಮಗನನ್ನು ದುಃಖ ಪಡಿಸುತ್ತಿದ್ದರು.

ತಾತ್ಪರ್ಯವು.

ಇದೇ ಪ್ರಕಾರ ದೇವರು ಉತ್ತಮನೂ ಪರಿಶುದ್ಧನೂ ಆಗಿ ದ್ದಾನೆ. ಆದ ಕಾರಣ ಸಮಸ್ತ ಪಾಪವು ಆತನ ದೃಷ್ಟಿಯಲ್ಲಿ ಅಸಹ್ಯಕರವಾಗಿದೆ; ಆದಾಗ್ಯೂ ಮನುಷ್ಯರು ತಮ್ಮ ಪಾಪದೋ ಷವನ್ನು ದೇವರ ಮೇಲೆ ಹಾಕಿ, ಆತನೇ ಪಾಪ ಮಾಡುವ ಹಾಗೆ

ಬುದ್ಧಿ ಕೊಡುತ್ತಾನೆಂದು ತೋರಿಸುವದಕ್ಕೆ "ಮಾಡುವವನೂ ಮಾಡಿಸುವವನೂ" ದೇವರೇ ಹೊರ್ತು ಮನುಷ್ಯನಿಂದೇನಾದೀತೆಂದು ಹೇಳುತ್ತಾರೆ. ಹೀಗೆ ಹೇಳುವದರಿಂದ ಜನರು ತಾವು ಪಾಪಿಗಳಲ್ಲವೆಂದು ತೋರಿಸುತ್ತಾರೆ. ಆದರೆ ಪಾಪಕ್ಕೆ ಮೆಚ್ಚದೆ, ಅದನ್ನು ಹಗೆ ಮಾಡುವ ಪರಿಶುದ್ಧ ದೇವರು ತಾನೇ ಮನುಷ್ಯರನ್ನು ಪಾಪ ಮಾಡುವ ಹಾಗೆ ಪ್ರೇರೇಪಿಸಿದರೆ, ಪಾಪಿಷ್ಟರನ್ನು ದಂಡಿಸಿ, ನರಕಾಗ್ನಿಯ ಬಾಧೆಯಿಂದ ಶಿಕ್ಷಿಸುವದು ಹ್ಯಾಗೆ? ಹೀಗಿದ್ದರೆ ದೇವರು ನೀತಿಯುಳ್ಳವನೆಂದು ಹ್ಯಾಗೆ ಹೇಳ ಬಹುದು? ಒಬ್ಬ ಅರಸನು, ತನ್ನ ಪ್ರಜೆಗಳನ್ನು ಸುಲಿಗೆ ಪುಂಡಾಟ ಇತ್ಯಾದಿ ದುಷ್ಟ ಕೃತ್ಯಗಳನ್ನು ನಡಿಸಗೊಟ್ಟು, ಆ ಮೇಲೆ ಅವರನ್ನು ದಂಡಿಸಿ ಬಂಧಿಖಾನೆಯಲ್ಲಿ ಹಾಕಿದರೆ, ಅಂಥಾ ಅರಸನು ಒಳ್ಳೆಯವನೂ ನೀತಿವಂತನೂ ಎಂದು ಹೇಳ ಬಹುದೋ? ಆದರೆ ಪ್ರಿಯ ಜನರೇ, ದೇವರು ಉತ್ತಮನೂ ನೀತಿಯುಳ್ಳವನೂ ದಯಾಪರನೂ ಆಗಿದ್ದಾನೆಂಬ ವಿಷಯದಲ್ಲಿ ಅನೇಕ ದೃಷ್ಟಾಂತಗಳು ಕಾಣುತ್ತವೆ. ಆತನ ಉದಾರತ್ವದ ಉಪಕಾರಗಳನ್ನು ನಿತ್ಯವಾಗಿ ಮನುಷ್ಯರೆಲ್ಲರು ಅನುಭವಿಸುತ್ತಾರೆ. ಹೀಗಿದ್ದಂತೆ ಆ ಪರಿಶುದ್ಧನಾದ ದೇವರನ್ನು ನಿಂದಿಸುತ್ತಾರೆ. ಪಾಪ ಮಾಡುವದೇ ಕೆಟ್ಟದು, ಆದರೆ ಪಾಪದ ದೋಷವನ್ನು ಜಗದ್ರಾಜನ ಮೇಲೆ ಹೊರಿಸುವದು ಅಗದಿ ಕೆಟ್ಟದು. ಇಂಥಾ ಅಪರಾಧಕ್ಕೆ ನ್ಯಾಯತೀರ್ವಿಕೆಯ ಕಾಲದ

ಲ್ಲಿ ಎಂಥಾ ಕಠಿಣ ಶಿಕ್ಷೆ ಆಗುವದು, ನೋಡಿರಿ! ಹೀಗೆ ಜನರು ಒ ಳ್ಳೇ ದೇವರನ್ನು ನಿಂದಿಸುವದು ಆತನ ಭಕ್ತರೆಂಬ ಮಕ್ಕಳಿಗೆ ಹೃ ದಯಕ್ಕೆ ಅಂಬು ತಗಲಿದ ಹಾಗೆ ಆಗುವದು. ಆದರೆ ದೇವರು ಪಾ ಪ ಮಾಡಿಸುವದಿಲ್ಲ ಎಂಬುವದಕ್ಕೆ ದೇವರ ವಾಕ್ಯದಲ್ಲಿ ಬರದ ಸಾ ಕ್ಷಿವಚನ ನೋಡಿರಿ!

"ಯಾವನಾದರೂ ಶೋಧಿಸಲ್ಪಡುವಾಗ ದೇವರಿಂದ ಶೋ ಧಿಸಲ್ಪಡುತ್ತೇನೆಂದು ಹೇಳದಿರಲಿ, ಯಾಕಂದರೆ ದೇವರು ಕೆಟ್ಟದ ರಿಂದ ಶೋಧಿಸಲ್ಪಡದವನು; ತಾನೂ ಒಬ್ಬನನ್ನೂ ಶೋಧಿಸುವ ದಿಲ್ಲ." (ಯಾಕೋಬ. ೧ನೇ ಸಂಧಿ, ೧೩—೧೪.)

---

## ೨. ಉಪಮೆ.

## "ಹಿರಿಯರ ಮಾರ್ಗ ಬಿಡ ಬಾರದು."

ಒಂದು ಊರಿನಲ್ಲಿ ಒಬ್ಬ ಕಳ್ಳನು ಪೋಲೀಸ್ ಶಿಪಾಯ ರ ಕೈಯೊಳಗೆ ಶಿಕ್ಕಿ ಬಿದ್ದನು. ಆತನನ್ನು ಆ ಶಿಪಾಯರು ಹಿಡಿದು ತಂದು, ಠಾಣೆಯಲ್ಲಿ ಕೋಳ ಹಾಕಿ ಇಟ್ಟಿರುವ ಸ ಮಯದಲ್ಲಿ, ಒಬ್ಬ ಧರ್ಮಬೋಧಕನು ಆ ಮಾರ್ಗವಾಗಿ ಹೋಗುತ್ತಾ ಅವನನ್ನು ಕಂಡು, ಅವನ ಮೇಲೆ ಅಂತಃಕರಣ

ಪಟ್ಟು, ಅವನಿಗೆ ಸ್ವಲ್ಪ ಬುದ್ಧಿ ಹೇಳಿ—ನೀನು ಇನ್ನು ಮುಂದೆ ಕಳ್ಳತನ ಮಾಡ ಬೇಡ, ಅಂಥಾ ಕೆಟ್ಟ ಕೃತ್ಯದಿಂದ ನೀನು ದೇವರ ಮುಂದೆಯೂ ಮನುಷ್ಯರ ಮುಂದೆಯೂ ದೊಡ್ಡ ಅಪರಾಧಿಯಾಗುತ್ತೀ; ಈಗ ಸರಕಾರದವರು ನಿನಗೆ ಕೊಡುವ ಶಿಕ್ಷೆಗಿಂತ ದೇವರು ಕೊಡುವ ನರಕದ ಶಿಕ್ಷೆಯು ಬಹಳ ಕಠಿಣವಾಗಿರುವದು; ಆದದರಿಂದ ಕಳ್ಳತನವನ್ನು ಬಿಟ್ಟು ಚನ್ನಾಗಿ ಕಷ್ಟ ಮಾಡಿ ಸನ್ಮಾರ್ಗದಲ್ಲಿ ನಡದರೆ, ಸೌಖ್ಯವಾಗಿರುವಿ ಎಂದು ಹೇಳಿದನು. ಅದಕ್ಕೆ ಆ ಕಳ್ಳನು ಉತ್ತರವಾಗಿ—ಸಾಹೇಬರೇ, ನೀವು ಹೇಳುವ ಬುದ್ಧೀ ಮಾತು ಒಳ್ಳೇದೇ ಸರಿ; ಆದರೆ ನನ್ನ ಹಿರಿಯರ ಮಾರ್ಗವನ್ನು ನಾನು ಹ್ಯಾಗೆ ಬಿಡಬಹುದು? ನನ್ನ ಹಿರಿಯರೆಲ್ಲರು ಪೂರ್ವದಾರಭ್ಯ ಕಳ್ಳತನದ ವೃತ್ತಿಯಿಂದಲೇ ತಮ್ಮ ಜೀವನವನ್ನು ಸಂಪಾದಿಸಿ ಕೊಳ್ಳುತ್ತಾ ನಡ ಕೊಂಡು ಬಂದರು. ನಾನು ಅವರ ಧರ್ಮವನ್ನು ಬಿಟ್ಟು ಬಿಡುವದು ಹ್ಯಾಗೆ? ನಾನು ಕಳ್ಳತನ ಬಿಟ್ಟರೆ, ಅದು ಹಿರಿಯರ ಧರ್ಮಕ್ಕೆ ವಿರೋಧವಾಗಿರುವದು. ನಮ್ಮ ಪೂರ್ವಿಕರ ಧರ್ಮಪದ್ಧತಿಯನ್ನು ನಾನು ಬಿಡ ಕೂಡದು ಎಂದು ಹೇಳಿದನು.

## ತಾತ್ಪರ್ಯವು.

ಹೀಗೆಯೇ ಹಿಂದು ಜನರು ಹೇಳುತ್ತಾರೆ. ಸತ್ಯವೇನು? ಸುಳ್ಳು ಏನು? ಒಳ್ಳೇದೇನು? ಕೆಟ್ಟದೇನು? ಎಂಬ ವಿಚಾರವನ್ನು ವಿವೇಕವುಳ್ಳ ಮನಸ್ಸಿನಿಂದ ಮಾಡದೆ, ಮೇಲೆ ಹೇಳಿದ ಆ ಕಳ್ಳನ ಮಾತಿನ ಪ್ರಕಾರ ತಮ್ಮ ಪೂರ್ವಿಕರ ಪದ್ಧತಿಯನ್ನು ಹಿಂದು ಜನರು ಅನುಸರಿಸಿ ನಡಕೊಳ್ಳುತ್ತಾರೆ. ಬೆಳ್ಳಿ, ಭಂಗಾರ, ಕಲ್ಲು ಇತ್ಯಾದಿ ವಸ್ತುಗಳಿಂದ ಮಾಡಿದ ದೇವರುಗಳು ವ್ಯರ್ಥವಾದವುಗಳೆಂದು ಹೇಳಿದರೆ, ಅವರು ತಮ್ಮ ಪೂರ್ವಿಕರು ಮಾಡಿದ ಪದ್ಧತಿಯನ್ನು ತ್ಯಜಿಸದೆ ಅವುಗಳನ್ನು ಕಾಪಾಡಿ ನಡಿಸ ಬೇಕೆಂದು ಹೇಳುತ್ತಾರೆ. ಮೂರ್ತಿಪೂಜೆಯನ್ನು ಸ್ಥಾಪಿಸಿದ ಬ್ರಾಹ್ಮಣರು ಸಹಾ ಅದಕ್ಕೆ ಆಧಾರವಾಗಿ ವ್ಯರ್ಥ ತರ್ಕಗಳನ್ನು ಮಾಡಿ, ಮೂರ್ತಿಪೂಜೆಯು ದೇವರಿಗೆ ಸಮರ್ಪಕವಾದದ್ದು; ಅದರಿಂದ ದೇವರ ಅನುಗ್ರಹವನ್ನು ಪಡಕೊಳ್ಳ ಬಹುದೆಂದು ಹೇಳುತ್ತಾರೆ. ಮತ್ತು ಪೂರ್ವಿಕರ ಧರ್ಮಪದ್ಧತಿಯನ್ನು ತಾವು ಬಿಡ ಬಾರದೆಂದು, ಅದಕ್ಕೆ ಅನುಕೂಲವಾಗಿರುವ ಜಾತಿಭೇಧವನ್ನು ಅನುಸರಿಸಿ, ಪರಜಾತಿಯವರನ್ನು ತುಚ್ಛೀಕರಿಸುತ್ತಾರೆ. ಹೀಗೆ ಜಾತಿಭೇದ ಮಾಡುವದರಿಂದ ಜನರಲ್ಲಿ ಪ್ರೀತಿಯೂ ಐಕ್ಯವೂ ಇಲ್ಲದೆ, ದ್ವೇಷ ಉಂಟಾಗಿ ಒಬ್ಬರಿಗೊಬ್ಬರು ಕೇಡು ಯೋಚಿಸುತ್ತಾರೆ. ಇದೇ ಜಾತಿಭೇದದ ಫಲವು.

ಈ ಪ್ರಕಾರ ಜಾತಿಧರ್ಮವನ್ನು ಕಾಪಾಡ ಬೇಕೆಂದು, ಅನೇಕರು ತಮ್ಮ ಧರ್ಮವು ತಪ್ಪಾಗಿದ್ದರೂ, ಅದನ್ನೇ ಅನುಸರಿಸಿ ನಡದು, ದೇವರಾಜ್ಞೆಯನ್ನು ಮೀರಿ, ತಮ್ಮ ದುರಿಚ್ಛೆಗಳನ್ನು ತೃಪ್ತಿ ಪಡಿಸುವ ಹಾಗೆ ನಾನಾ ಸುಳ್ಳು ಪ್ರಮಾಣಗಳನ್ನು ಸ್ಥಾಪಿಸುತ್ತಾರೆ. ಮೇಲೆ ಹೇಳಿದ ಕಳ್ಳನ ಮಾತಿಗೆ ಜನರು ನೆಗಾಡಿದರೂ, ತಾವು ಮಾಡುವದೇನು? ಎಂದು ವಿಚಾರಿಸದೆ ಪೂರ್ವಿಕರ ಮಾರ್ಗದಲ್ಲಿ ನಡಿಯುತ್ತಾರೆ.

"ಕ್ರಿಸ್ತನ ಅಮೂಲ್ಯವಾದ ರಕ್ತದಿಂದಲೇ ಪಿತೃಸಂಪ್ರದಾಯವಾದ ನಿಮ್ಮ ವ್ಯರ್ಥ ನಡತೆಯಿಂದ ಬಿಡುಗಡೆಯಾದಿರೆಂದು ಬಲ್ಲಿರಿ." (೧ ಪೇತ್ರ. ೧, ೧೮.)

---

## ೩. ಉಪಮೆ.

## ಬಹು ಕಾಲದ ಶೆರೆಯವನು.

ಚೀನಾ ದೇಶದಲ್ಲಿ ವೃದ್ಧನಾದ ಅರಸನು ಮರಣಾಧೀನನಾದ ಮೇಲೆ, ಹೊಸ ಅರಸನು ಪಟ್ಟಾಭಿಷೇಕ ಹೊಂದಿ ಗದ್ದುಗೆಯಲ್ಲಿ ಕೂತು ಕೊಂಡಿರುವ ಸಮಯದಲ್ಲಿ, ಆತನ ಪಟ್ಟಾಭಿಷೇಕದ ಉತ್ಸವಕ್ಕೆ ನೆರದ ನಾನಾ ತರದ ಜನರಿಗೆ ಸಂ

ತೋಷ ಉಂಟಾಗುವ ಹಾಗೆ ಅನೇಕ ಶೆರೆಯವರನ್ನು ಶೆರೆಮನೆಯಿಂದ ಬಿಡುಗಡೆ ಮಾಡಿದನು. ಆಗ ಬಹು ಕಾಲದಿಂದ ಬಂಧನೆ ಅನುಭವಿಸಿದ ಒಬ್ಬ ವೃದ್ಧನು ಅರಸನ ಮುಂದೆ ಅಡ್ಡ ಬಿದ್ದು, ಅರಸನಿಗೆ, ತನ್ನನ್ನು ಸಾಯುವ ಪರಿಯಂತರ ಶೆರೆಯಲ್ಲಿರ ಗೊಡಿಸ ಬೇಕೆಂದು ಬೇಡಿ ಕೊಂಡನು. ಅರಸನು ಅವನ ವಿನಂತಿಯನ್ನು ಕೇಳಿ, ಬಹು ಆಶ್ಚರ್ಯ ಪಟ್ಟು, ಅವನಿಗೆ—ನೀನು ಇಂಥಾ ಮನವಿಯನ್ನು ಮಾಡಲಿಕ್ಕೆ ಕಾರಣವೇನೆಂದು ಕೇಳಲು, ಮುದುಕನು—ಅರಸನೇ, ನಾನು ಯೌವನದಲ್ಲಿ ಶೆರೆಯಲ್ಲಿ ಬಿದ್ದು ಇಂದಿನ ತನಕ ಜೇವನ ಮಾಡಿ ಕೊಂಡೆ; ಈಗ ಮುದುಕನಾಗಿ ಬಿಡುಗಡೆ ಹೊಂದಲಿಕ್ಕೆ ಮನಸ್ಸಿಲ್ಲವೆಂದು ಉತ್ತರ ಕೊಟ್ಟನು.

## ತಾತ್ಪರ್ಯವು.

ಇದೇ ಪ್ರಕಾರ ಅನೇಕರು ಚಿಕ್ಕತನದಿಂದ ಸುಳ್ಳು ಮಾರ್ಗದಲ್ಲಿಯೂ ಸುಳ್ಳು ಧರ್ಮದ ಆಚರಣೆಯಲ್ಲಿಯೂ ನಡದು, ಅಜ್ಞಾನ, ಭ್ರಾಂತಿ, ಪಾಪಕರ್ಮವೆಂಬ ಸಂಕೋಲೆಗಳಿಂದ ಕಟ್ಟಲ್ಪಟ್ಟವರಾಗಿದ್ದಾರೆ. ಆದಾಗ್ಯೂ ಕರುಣವುಳ್ಳ ದೇವರು ಅವರನ್ನು ಆ ಸಂಕೋಲೆಗಳಿಂದ ಬಿಡುಗಡೆ ಮಾಡಿ ಮುಕ್ತಿ ಕೊಡುವದಕ್ಕೆ ಮನಸ್ಸುಳ್ಳವನಾಗಿ, ಯೇಸು ಕ್ರಿಸ್ತನೆಂಬ ರಕ್ಷಕನನ್ನು ಕಳುಹಿಸಿ

ದ್ದಾನೆ; ಮತ್ತು ಅವರಿಗೆ ಆ ರಕ್ಷಕನ ವರ್ತಮಾನವನ್ನು ತಿಳಿಸುವದಕ್ಕಾಗಿ, ಆತನ ಸೇವಕರು ಊರೂರಿಗೆ ಹೋಗಿ ಆತನ ಸುವಾರ್ತೆಯನ್ನು ಸಾರುತ್ತಾರೆ. ಆದರೆ ಜನರು ಹಿಂದೆ ಹೇಳಿದ ಕೆರೆಯುವನ ಹಾಗೆಯೇ ತಮ್ಮ ಪಾಪದ ಸಂಕೋಲೆಯಿಂದ ಬಿಡುಗಡೆ ಹೊಂದಲಿಕ್ಕೆ ಮನಸ್ಸಿಲ್ಲದೆ ತಮ್ಮ ಹಿತಕ್ಕಾಗಿ ದೇವರಿಂದ ಕಳುಹಿಸಲ್ಪಟ್ಟ ಸುವಾರ್ತೆಯನ್ನು ತಿರಸ್ಕರಿಸಿ, ತಮ್ಮ ಸುಳ್ಳು ಮಾರ್ಗಕ್ಕೆ ಅಂಟಿ ಕೊಂಡಿದ್ದಾರೆ. ಇದು ದೊಡ್ಡ ಆಶ್ಚರ್ಯವೇ ಸರಿ! ಓ ಜನರೇ, ಅಪರಿಮಿತ ಕರುಣಾವುಳ್ಳ ದೇವರು ನಿಮ್ಮನ್ನು ಪಾಪದ ಬಂಧನೆಯಿಂದಲೂ ಭ್ರಾಂತಿಯ ಶೆರೆಮನೆಯಿಂದಲೂ ಲೋಭಿಯಾದ ಗುರುಗಳ ಬಲಾತ್ಕಾರದಿಂದಲೂ ಬಿಡುಗಡೆ ಮಾಡಲಿಕ್ಕೆ ಇಚ್ಛೈಸಿ, ನಿಮ್ಮ ಅಂಧಕಾರದ ಕೋಣೆಯ ಬಾಗಿಲನ್ನು ತೆರದಿದ್ದಾನೆ. ಆದದರಿಂದ ಹೊರಡುವದಕ್ಕೆ ತಾಮಸ ಮಾಡ ಬೇಡಿರಿ!

"ಕೋಳಿಯು ತನ್ನ ಮರಿಗಳನ್ನು ರೆಕ್ಕೆಗಳ ಕೆಳಗೆ ಹೊದಗಿಸುವ ಪ್ರಕಾರ, ನಿನ್ನ ಮಕ್ಕಳನ್ನು ಹೊದಗಿಸ ಎಷ್ಟೋ ಸಾರಿ ಮನಸ್ಸಾಗಿದ್ದೆನು; ಆದರೆ ಒಲ್ಲದೆ ಹೋದಿರಿ." (ಮತ್ತಾ. ೨೩, ೩೭.)

---

## ೪. ಉಪಮೆ.

### ಅದೃಷ್ಟವೇ ಮುಖ್ಯ ಎಂಬುವ ಮಾತು.

ಒಬ್ಬ ಮೂರ್ಖ ಮನುಷ್ಯನು ಮಾರ್ಗಸ್ಥನಾಗಿ ಹೋಗುವಾಗ್ಯೆ ತನ್ನ ಮನಸ್ಸಿನಲ್ಲಿ ಆಲೋಚಿಸಿದ್ದು—ಸರ್ವ ಕಾರ್ಯವು ಅದೃಷ್ಟದ ಸ್ವಾಧೀನವಾಗಿದೆ; ಬರುವಂಥಾದ್ದು ತಪ್ಪದೆ ಬರುವದು; ಮರಣಕಾಲ ಬಂದರೆ, ಯಾರಿಂದಲೂ ತಪ್ಪಿಸ ಕೂಡದು; ಮೃತ್ಯು ಬಾರದಿದ್ದರೆ, ಎಲ್ಲಿದ್ದರೂ ಎಲ್ಲಿ ಬಿದ್ದರೂ ಏನೂ ಭಯವಿಲ್ಲ ಎಂಬ ಇಂಥಾ ಮೂರ್ಖ ಆಲೋಚನೆಯಿಂದ ಹೋಗುವಾಗ್ಯೆ, ಒಂದು ಆಳವಾದ ಭಾವಿಯ ಸಮೀಪಕ್ಕೆ ಬಂದನು. ಅದನ್ನು ನೋಡಿದ ಕೂಡಲೇ ಅವನು, ತನ್ನ ಅದೃಷ್ಟದಲ್ಲಿ ಈಗಲೇ ಮರಣಕಾಲ ಬಂದಿದ್ದರೆ, ತನ್ನ ಯಾವ ಯುಕ್ತಿಯಿಂದಲಾದರೂ ತನ್ನ ಪ್ರಾಣ ಉಳಿಸ ಕೂಡದು; ಇಲ್ಲದಿದ್ದರೆ ತಾನು ಯಾವ ಗಂಡಾಂತರದಲ್ಲಿ ಬಿದ್ದರೂ ಚಿಂತೆ ಇಲ್ಲ ಎಂದು ವಿವೇಕವುಳ್ಳ ವಿಚಾರ ಮಾಡದೆ, ಆ ಭಾವಿಯೊಳಗೆ ಹಾರಿ ಬಿದ್ದು ತನ್ನ ಪ್ರಾಣವನ್ನು ಕಳಕೊಂಡನು.

## ತಾತ್ಪರ್ಯವು.

ಈ ಪ್ರಕಾರ ಅನೇಕ ಹಿಂದು ಜನರು ಅದೃಷ್ಟದ ಮೇಲೆ ಭಾರವಿಟ್ಟು ಬೇಕೆಂತ ಮರಣಕ್ಕೆ ಗುರಿಯಾಗುತ್ತಾರೆ. ಹ್ಯಾಗಂದರೆ: ತಿರುಪತಿ, ಸುಬ್ರಹ್ಮಣ್ಯ, ಪಂಡರಪುರ ಇತ್ಯಾದಿ ಸ್ಥಳಗಳಿಗೆ ಯಾತ್ರೆ ಮಾಡ ಬೇಕೆಂದು ಹೋಗುತ್ತಾರೆ, ಅಲ್ಲಿ ಕುರಿಹಿಂಡಿನಂತೆ ಗುಂಪು ಗುಂಪಾಗಿ ಕೂಡುತ್ತಾರೆ. ಹೀಗೆ ಒಂದು ಕಡೆಯಲ್ಲಿ ಅನೇಕರು ಕೂಡಿರುವದರಿಂದ ಮಲಮೂತ್ರ ಇತ್ಯಾದಿಗಳಿಂದ ಹವೆ ಕೆಟ್ಟು ಹೋಗಿ, ಹೊಲಸು ನಾತಗಳಿಂದ ವಿಷದ ಘಾಳಿ ಹುಟ್ಟಿ ನಾಲ್ಕು ಕಡೆಗೆ ಹಬ್ಬುವದರಿಂದ ಪಟಕಿ ರೋಗ ಉಂಟಾಗಿ, ಸಾವಿರಾರು ಜನರು ಮೃತ್ಯು ಕೊಂಡಿಗೆ ಆಹುತಿಯಾಗುತ್ತಾರೆ. ಈ ಪ್ರಕಾರ ಆ ಮೂರ್ಖ ಮನುಷ್ಯನು ಭಾವಿಯಲ್ಲಿ ಬಿದ್ದು ನಾಶವಾದ ಹಾಗೆ ಅನೇಕರು ಭ್ರಾಂತಿ ಹಿಡಿದವರಾಗಿ, ಪುಣ್ಯ ಮಾಡ ಬೇಕೆಂತ ಹೋಗಿ, ಒಂದೇ ಸಾರಿ ಮೃತ್ಯುವಿನ ಬಾಯೊಳಗೆ ಬಿದ್ದು ನಾಶವಾಗಿ ತಮ್ಮ ಮಕ್ಕಳುಮರಿಗಳನ್ನು ದಿಕ್ಕಿಲ್ಲದವರಾಗಿ ಮಾಡುತ್ತಾರೆ. ಹೀಗೆ ಬೇಗ ಮರಣ ಅಪೇಕ್ಷಿಸಿದರೆ, ತಿರುಪತಿ, ಪಂಡರಪುರ ಇತ್ಯಾದಿ ಭಯಂಕರವಾದ ಸ್ಥಳಗಳಿಗೆ ಹೋಗ ಬೇಕು! ಆದರೆ ಓ ಪ್ರಿಯ ಜನರೇ, ದೇವರ ಕೃಪಾಕಟಾಕ್ಷ ದೊರಕಿಸಿ ಕೊಳ್ಳ ಬೇಕಾದರೆ, ನಿಮ್ಮ ಮನೆಯೊಳಗೆಯೆ ಇದ್ದು,

ದೇವರಿಗೆ ಶರಣು ಬಿದ್ದು ಲೋಕರಕ್ಷಕನಾದ ಯೇಸು ಕ್ರಿಸ್ತನಲ್ಲಿ ವಿಶ್ವಾಸವಿಟ್ಟು, ಪಾಪಕ್ಕೆ ಮಾನಸಾಂತರ ಪಟ್ಟು, ಆತನ ಹೆಸರಿನಲ್ಲಿ ಕ್ಷಮೆ ಬೇಡಿ ಕೊಂಡು, ದೇವರ ಆಶ್ರಯದಲ್ಲಿ ಶೇರ ಬೇಕು. ಇದೇ ಪಾಪಪರಿಹಾರಕ್ಕಾಗಿ ಪ್ರೀತಿಭರಿತನಾದ ದೇವರು ಮನುಷ್ಯರಿಗೋಸ್ಕರ ಉಂಟು ಮಾಡಿದ ನಿಜ ಮಾರ್ಗವಾಗಿದೆ.

"ಯೇಸು ಕ್ರಿಸ್ತನೇ ಕೋಣಾಗ್ರದ್ದಾದ ಕಲ್ಲಾಗಿದ್ಧಾನೆ; ಮತ್ತ್ಯಾವನಲ್ಲಿಯೂ ರಕ್ಷಣೆ ಇಲ್ಲ." (ಅಪೊ. ಕ್ರಿ. ೪, ೧೧. ೧೨.)

---

## ೫. ಉಪಮೆ.

## ಕಲ್ಲಿನ ಮೂರ್ತಿಯ ಮಹಿಮೆ.

ಕಲ್ಲುಪುರವೆಂಬ ಒಂದು ಊರಿನಲ್ಲಿ ವಾಗ್ದೇವಿ ಎಂಬ ದೇವತೆಯ ಒಂದು ಗುಡಿ ಉಂಟು. ಒಮ್ಮೆ ಆ ದೇವಿಯ ಪೂಜೆ ಮಾಡುವ ಭಟ್ಟನು ಕಾಣಿಕೆಗಳೂ ಹರಿಕೆಗಳೂ ಬಹು ಕಡಿಮೆಯಾದದ್ದು ನೋಡಿ, ಹೆಚ್ಚು ಕಾಣಿಕೆ ಇತ್ಯಾದಿ ಹರಿಕೆಗಳು ಬರುವ ಹಾಗೆ ಒಂದು ಉಪಾಯ ಮಾಡಿದನು. ಅದು ಹ್ಯಾಗಂದರೆ: ಆ ದೇವಿಯು ಶಿಲಾಮೂರ್ತಿಯಾಗಿ

ತ್ತು; ಅದರ ತಲೆಯ ಬುರುಡೆಯನ್ನು ಕೊರಿಸಿ, ಕುಣಿ ಮಾಡಿಸಿ, ನೇತ್ರಗಳಲ್ಲಿ ರಂಧ್ರಗಳನ್ನು ತೆಗಿಸಿ, ಆ ತಲೆಬುರುಡೆಯ ಕುಣಿಯಲ್ಲಿ ಒದ್ದೆ ಅರಳೆಯನ್ನು ತುರುಕಿ, ಅದು ಕಾಣದ ಹಾಗೆ ಶಿಲಾಕಿರೀಟವನ್ನು ಇಟ್ಟು, ಕಣ್ಣು ರಂಧ್ರಗಳಿಂದ ನೀರು ಸುರಿಯ ಮಾಡಿ, ಊರೊಳಗೆ ಹೋಗಿ ದುಃಖಾಲಾಪನೆಯಿಂದ ಒದರಿದನು. ಆಗ್ಯೆ ಜನರು ಕೂಡಿ ಕೊಂಡು, ನಿನಗೇನಾಯಿತಪ್ಪಾ? ಎಂದು ಅವನಿಗೆ ಕೇಳಲಾರಂಭಿಸಿದರು. ಆಗ ಅವನು ಅವರಿಗೆ—ನಿಮ್ಮ ದೇವಿಯು ಕಾಣಿಕೆ, ಹರಿಕೆ ಇತ್ಯಾದಿಗಳು ಬರುವದಿಲ್ಲವೆಂದು ಕಣ್ಣೀರು ಸುರಿಸಿ ಅಳುತ್ತಾಳೆ; ಆದ್ದರಿಂದ ಈ ಊರಿಗೆ ಮಹಾ ಕೇಡು ಬರುವದೆಂದು ದುಃಖಪಡುತ್ತೇನೆ, ಅಂದನು. ಈ ಮಾತನ್ನು ಕೇಳಿ, ಜನರು ಘಾಬರಿಯಾಗಿ ಮಹಾ ದಿಗಿಲೊಡನೆ ಅಂದಿನಿಂದ ಯಥೇಷ್ಟ ಕಾಣಿಕೆಗಳನ್ನೂ ಹರಿಕೆಗಳನ್ನೂ ವಾದ್ಯರಭಸಾದಿ ಗಾಯನಗಳಿಂದ ತರಲಾರಂಭಿಸಿದರು. ಈ ಆಶ್ಚರ್ಯವಾದ ವರ್ತಮಾನವು ಆ ಊರಿನ ಅಧಿಪತಿಗೆ ತಿಳಿದು ಬಂದಾಗ್ಯೆ, ಆತನು ಆ ಊರ ಗೃಹಸ್ಥರನ್ನು ಕರಕೊಂಡು, ಆ ವದಂತಿಯು ಖರೆಯೋ? ಸುಳ್ಳೋ? ಏನೆಂಬದನ್ನು ತಿಳುಕೊಳ್ಳ ಆ ಗುಡಿಗೆ ಬಂದು ನೋಡಲು, ಕಾರ್ಯವು ಖರೆಯಾಗಿ ಕಂಡಿತು. ಆಗಲವನು

ವಿವೇಕವುಳ್ಳ ವಿಚಾರ ಮಾಡಿ, ಕಣ್ಣಾರೆ ಕಂಡರೂ ಪರಾಂಬರಿಸಿ ನೋಡ ಬೇಕೆಂದು, ಆ ಶಿಲಾಮೂರ್ತಿಯ ಕಪಾಲವನ್ನು ಪರಿಶೋಧಿಸಿ ನೋಡಲು, ಪೂಜಾರಿಯ ಮೋಸದ ಯುಕ್ತಿಯು ಕಂಡು ಬಂತು. ಆ ಕ್ಷಣದಲ್ಲೇ ಆ ಅಧಿಪತಿಯು ಕೋಪದಿಂದ ಪೂಜಾರಿಯನ್ನು ದಂಡಿಸಿ, ಆ ಮೂರ್ತಿಯನ್ನು ಕಿತ್ತು ಬಿಸಾಡಿದನು.

ತಾತ್ಪರ್ಯವು.

ಓ ಜನರೇ, ಆ ಪೂಜಾರಿಯ ಮೋಸದಿಂದ ಅನೇಕರು ಮರುಳಾಗಿ ಮೋಸ ಹೋದರೆಂದು ನೀವು ಹೇಳುವಿರಿ. ಆದರೆ ನಿಮ್ಮಲ್ಲಿಯೂ ಇದೇ ಪ್ರಕಾರ ಅನೇಕರು ಪೂಜಾರಿ ಭಟ್ಟರುಗಳ ಮೋಸದಿಂದ ಮೋಸ ಹೋಗುತ್ತಾರೆ. ಶಿಲಾಮೂರ್ತಿಗಳಾದ ಮಾರಿಯಮ್ಮ, ಮಂಗಳಾದೇವಿ, ಇತ್ಯಾದಿ ಹೆಣ್ಣು ದೇವತೆಗಳ ಗುಡಿಗಳಿಗೆ ಕಾಣಿಕೆ ಇತ್ಯಾದಿ ಹರಿಕೆಗಳನ್ನು ತಕ್ಕೊಂಡು ಹೋಗಿ, ಪೂಜೆಗಳನ್ನು ಮಾಡಿಸಿ, ಆ ನಿರ್ಜೀವ ಕಲ್ಲುಗಳಿಗೆ ಅಡ್ಡ ಬಿದ್ದು ವಂದಿಸುತ್ತಾರೆ. ಮನುಷ್ಯರ ಅಕ್ರಮಗಳಿಗಾಗಿ ನಿಜ ದೇವರು ರೋಗರಚನಾದಿಗಳಿಂದ ಶಿಕ್ಷಿಸಿದರೆ, ಆ ರೋಗವು ನವದುರ್ಗಿಗಳಿಂದ ಬಂತೆಂದು ಮೂರ್ಖ ಭಾವನೆಯಿಂದ ಮಾರಿಗೆ ಕೋಣ ಕುರಿ ಕೋಳಿ ಇತ್ಯಾದಿ ಜೀವಿಗಳ ಆಹುತಿಯಿಂದ ಮಹಾ ಪೂಜೆ ಕೊಡುತ್ತೀರಿ. ಈ ಪ್ರಕಾರ ನೀಚ ವಸ್ತುಗಳನ್ನು ದೇವರಿಗೆ ಸಮಾನ

ಮಾಡಿ, ಅವುಗಳಿಗೆ ಸೇವಿಸುವದರಿಂದ ದೇವರಿಗೆ ಸಮರ್ಪಕವಾಗು ತ್ತದೆಂದು ಹೇಳುತ್ತೀರಿ. ಇದು ಬಹು ಅಪ್ರಬುದ್ಧಿಯ ಕೆಲಸವಾ ಗಿದೆ. ಇದರಿಂದ ನಿಜ ದೇವರ ಕೋಪವು ನಿಮ್ಮ ಮೇಲೆ ಬರ ಮಾ ಡುತ್ತೀರಿ ಹೊರ್ತು ಆತನ ಕೃಪೆ ಹೊಂದುವದಿಲ್ಲ. ಆತನು ತನ್ನ ವಾಕ್ಯದಲ್ಲಿ ಹೇಳುವದೇನಂದರೆ: "ನಾನೇ ನಿಮ್ಮ ದೇವರು, ನನ್ನ ಮುಂದೆ ಅನ್ಯ ದೇವರುಗಳನ್ನು ಇರಿಸ ಬಾರದು.

"ದೇವರು ಒಬ್ಬನು; ದೇವರಿಗೂ ಮನುಷ್ಯರಿಗೂ ಮಧ್ಯ ಸ್ಥನು ಒಬ್ಬನು—ಮನುಷ್ಯನಾದ ಕ್ರಿಸ್ತ ಯೇಸುವೇ." (೧ ತಿಮೊಥ. ೨, ೫.)

---

## ೬. ಉಪಮೆ.

## ದೇವರು ಕಾಣುವದಿಲ್ಲ.

ಒಬ್ಬ ಗೃಹಸ್ಥನು ಒಂದು ಕಾರ್ಯದ ನಿಮಿತ್ತವಾಗಿ ಪ ರವೂರಿಗೆ ಹೋಗ ಬೇಕಾಗಿತ್ತು; ಆಗ್ಯೆ ಅವನು ತನ್ನ ಇ ಬ್ಬರು ಮಕ್ಕಳನ್ನು ತನ್ನ ಸಂಗಡ ಕರಕೊಂಡು, ಹೆಂಡತಿಗೆ ಖರ್ಚಿನ ಬಗ್ಯೆ ಹಣವನ್ನು ಕೊಟ್ಟು, ಮಕ್ಕಳ ಸಂಗಡ ಹೊ ರಟು ಹೋದನು. ಅವನ ಹೆಂಡತಿಯು ಮನೆಯಲ್ಲಿ ಒಬ್ಬ

ಳಾಗಿರುವ ಸಮಯದಲ್ಲಿ, ಅವಳು—ತನ್ನ ಗಂಡನೂ ಮಕ್ಕಳೂ ಕಾಣುವದಿಲ್ಲ, ಅವರು ಬರುವ ಪರ್ಯಂತರ ಅವರ ಬದಲಿಗೆ ಮೂರು ಕಲ್ಲುಗಳನ್ನಿಟ್ಟು, ಅವರ ನೆನವು ಮಾಡುವೆನೆಂದು ಆಲೋಚಿಸಿ, ಒಂದು ದೊಡ್ಡ ಕಲ್ಲೂ ಎರಡು ಸಣ್ಣ ಕಲ್ಲುಗಳೂ, ಹೀಗೆ ಮೂರು ಕಲ್ಲುಗಳನ್ನು ತಕ್ಕೊಂಡು ಮನೆಯೊಳಗೆ ಇರಿಸಿ, ತನ್ನ ಮನೆಗೆ ಬರುವವರಿಗೆ ಅವುಗಳನ್ನು ತೋರಿಸಿ, ಆ ದೊಡ್ಡ ಕಲ್ಲು ತನ್ನ ಗಂಡನು, ಆ ಎರಡು ಸಣ್ಣ ಕಲ್ಲುಗಳು ತನ್ನ ಮಕ್ಕಳು ಎಂದು ಹೇಳುವಳು ಮತ್ತು ಆ ಕಲ್ಲುಗಳಿಗೆ ನಯವಾದ ಒಳ್ಳೆ ವಸ್ತ್ರಭೂಷಣದಿಂದ ಅಲಂಕರಿಸಿ, ಆ ದೊಡ್ಡ ಕಲ್ಲಿಗೆ ತನ್ನ ಗಂಡನಂತೆ ಭಾವಿಸಿ, ಮುದ್ದಿಟ್ಟು ಕೊಂಡು ಅದರ ಸಂಗಡ ಮಾತಾಡುವಳು; ಹಾಂಗೂ ಆ ಸಣ್ಣ ಕಲ್ಲುಗಳನ್ನು ತನ್ನ ಮಕ್ಕಳಂತೆ ಭಾವಿಸಿ, ತನ್ನ ಉಡಿಯಲ್ಲಿ ಮಲಗಿಸಿ, ಪದಗಳನ್ನು ಹಾಡುತ್ತಿರುವಳು. ಈ ಪ್ರಕಾರ ಅವಳು ಹುಚ್ಚುತನದಿಂದ ಗಂಡನು ಖರ್ಚಿಗೆಂತ ಕೊಟ್ಟ ಹಣವೆಲ್ಲಾ ಆ ಕಲ್ಲುಗಳ ವಸ್ತ್ರಭೂಷಣಕ್ಕಾಗಿ ಖರ್ಚು ಮಾಡಿ ತೀರಿಸಿದಳು. ಕಡೆಗೆ ಜೀವನಕ್ಕೇನೂ ಇಲ್ಲದ ಕಾರಣ ಸಾಲ ಮಾಡಿದಳು. ಕೆಲವು ಕಾಲ ಹೀಗೆ ಗತಿಸಿದ ಮೇಲೆ, ಅವಳ ಗಂಡನೂ ಇಬ್ಬರು ಮಕ್ಕಳೂ ಅಕ

ಸ್ಮಾತ್ರಾಗಿ ಮನೆಗೆ ಬಂದರು. ಆಗ್ಯೆ ಅವಳ ಗಂಡನು ನಡದ ಕಾರ್ಯವನ್ನು ತಿಳದು, ಅವಳ ಬುದ್ಧಿಹೀನತ್ವದ ಆಚರಣೆಗಾಗಿ ಬಹಳ ಶಿಟ್ಟು ಮಾಡಿ, ಆ ಕಲ್ಲುಗಳನ್ನು ಕಾಲಿನಿಂದ ಒದ್ದಿ ಹೊರಗೆ ಬಿಸಾಡಿ, ಅವಳಿಗೆ, ತಾನು ಕಲ್ಲಾಗಿದ್ಧೇನೋ? ಎಂದು ಕೇಳಲು, ಅವಳು ಗಂಡನಿಗೆ—ನೀವು ಹೋಗಿ ಬಹು ಕಾಲದ ಪರಿಯಂತರ ಕಣ್ಣಿಗೆ ಕಾಣದೆ ಇದ್ದ ಕಾರಣ, ತಾನು ಈ ಕಲ್ಲುಗಳನ್ನು ನಿಮ್ಮ ಹೆಸರಿನಲ್ಲಿ ಸ್ಥಾಪಿಸಿದೆನು ಎಂದಳು. ತರುವಾಯ ಗಂಡನು ಅವಳು ಮಾಡಿದ ಸಾಲದ ಸಂಗತಿಯನ್ನು ತಿಳಿದ ಕೂಡಲೇ ಮಹಾ ಕೋಪದಿಂದ ಅವಳನ್ನು ಶಿಕ್ಷಿಸಿದನು. ಹೀಗೆ ಅವಳು ಸಾಲ ಮಾಡಿದ ದೆಸೆಯಿಂದ ಅವನು ದರಿದ್ರನಾಗಿ, ಸಾಲವನ್ನು ತೀರಿಸ ಕೂಡದೆ ಹೋದನು. ಆಗ್ಯೆ ಸಾಲ ಕೊಟ್ಟ ಸಾವಕಾರನು ಅವನ ಮೇಲೆ ವ್ಯಾಜ್ಯ ಮಾಡಿ, ಅವನನ್ನು ಶೆರೆಮನೆಯಲ್ಲಿ ಹಾಕಿಸಿದರಿಂದ, ಅವನು ನಾಚಿಕೆಯಿಂದಲೂ ದುಃಖದಿಂದಲೂ ತ್ವರ್ಯದಲ್ಲಿ ಸಮಾಧಿಗೆ ಶೇರಿದನು; ತರುವಾಯ ಅವನ ಹೆಂಡತಿ ಮಕ್ಕಳು ಭಿಕ್ಷಗಾರರಾದರು.

ತಾತ್ಪರ್ಯವು.

ಇದೇ ಪ್ರಕಾರ ಮನುಷ್ಯರು, ದೇವರು ಕಣ್ಣಿಗೆ ಕಾಣುವದಿ

ಲ್ಲವೆಂದು, ಬೆಳ್ಳಿ ಭಂಗಾರ ಕಲ್ಲು ಇತ್ಯಾದಿ ಪದಾರ್ಥಗಳಿಂದ ವಿಗ್ರಹಗಳನ್ನು ಮಾಡಿ ಕೊಂಡು, ಅವುಗಳಿಗೆ ಅಭಿಷೇಕ ಮಾಡಿ, ಗಂಧಾಕ್ಷತೆ ಹಚ್ಚಿ. ಪುಷ್ಪ ವಸ್ತ್ರಾದಿಗಳಿಂದ ಆ ಮೂರ್ತಿಗಳನ್ನು ಅಲಂಕರಿಸಿ, ಹಾಲು, ಅನ್ನ, ಸಕ್ಕರೆ, ಹಣ್ಣು, ಹಂಪಲು ಇತ್ಯಾದಿ ಪದಾರ್ಥಗಳಿಂದ ನೈವೇದ್ಯವನ್ನರ್ಪಿಸುತ್ತಾರೆ. ಮತ್ತು ಜಾತ್ರಿ ಸಮಯದಲ್ಲಿ ನಾನಾ ಹರಿಕೆಗಳನ್ನೂ ಕಾಣಿಕೆಹಣಗಳನ್ನೂ ತೆಗದು ಕೊಂಡು, ಅವುಗಳ ದರ್ಶನಕ್ಕೆ ಹೋಗಿ, ಆ ಜಾತ್ರೆಯಲ್ಲಿ ಬಹಳ ಹಣವನ್ನು ವ್ಯರ್ಥವಾಗಿ ಖರ್ಚು ಮಾಡುತ್ತಾರೆ. ಮತ್ತು ಕೆಲವರು ಮಾನ ಕೀರ್ತಿಗೋಸ್ಕರ ಆ ಜೀವರಹಿತವಾದ ವಿಗ್ರಹಗಳಿಗೆ ಮಹಾ ಪೂಜೆ ಮಾಡಿಸಿ, ಹೇರಳ ಹಣವನ್ನು ವೆಚ್ಚ ಮಾಡಿ, ಸಾಲದಿಂದ ಬಡವರಾಗಿ ಸಾಯುವ ಪರಿಯಂತರ ಸಾಲವನ್ನು ತೀರಿಸಲಾರದೆ ಹೋಗುತ್ತಾರೆ. ಆದರೆ ನಿಜವಾದ ದೇವರು ಇಂಥಾ ಅಟ್ಟಾಸದ ಸೇವೆಗೆ ಮೆಚ್ಚುವದಿಲ್ಲ; ಇಂಥಾ ಆಚರಣೆ ಆತನಿಗೆ ಸಮರ್ಪಕವಾಗಿರುವದಿಲ್ಲ. ಆತನು ಆತ್ಮನಾಗಿರುವದರಿಂದ, ಆತನಿಗೆ ಆತ್ಮದಿಂದಲೂ ಸತ್ಯದಿಂದಲೂ ಆರಾಧಿಸ ಬೇಕೆಂಬುವದೇ ಆತನ ಚಿತ್ತವು. ಮೂರ್ತಿಪೂಜಕರನ್ನು ಆತನು ನರಕಾಗ್ನಿಯಲ್ಲಿ ದೊಬ್ಬಿ ಬಿಡುವನು. ಓ ಜನರೇ, ನೀವೆಲ್ಲಿ ಇಂಥಾ ಪಾಪದ ಸಮುದ್ರದಲ್ಲಿ ಬಿದ್ದಿರುತ್ತೀರಲ್ಲವೋ? ಆದದರಿಂದ ನಿಮ್ಮ ಪಾಪಕ್ಕಾಗಿ ದುಃಖ ಪಟ್ಟು, ಲೋಕರಕ್ಷಕನಾಗಿ ಬಂದು ತನ್ನ ಜೀವವನ್ನು

ಸಮಸ್ತರ ಪಾಪಕ್ಕಾಗಿ ವಿಮೋಚನಬಲಿ ಅರ್ಪಿಸಿದ ಯೇಸು ಕ್ರಿಸ್ತನಲ್ಲಿ ವಿಶ್ವಾಸವಿಟ್ಟು, ಆತನ ಹೆಸರಿನಲ್ಲಿ ಪಾಪಕ್ಷಮೆಯನ್ನು ಬೇಡಿ ಕೊಳ್ಳಿರಿ. ಆಗಲು ನಿಮ್ಮ ಪಾಪವು ಎಷ್ಟು ದೊಡ್ಡದಾಗಿದ್ದರೂ ದೇವರು ಯೇಸು ಕ್ರಿಸ್ತನ ಸಲವಾಗಿ ಕ್ಷಮಿಸುತ್ತಾನೆ.

ದೇವರು ಕಣ್ಣಿಗೆ ಕಾಣದಿದ್ದರೂ, ಆತನು ಸರ್ವರಿಗೂ ಸಮೀಪವಾಗಿದ್ದಾನೆ; ಅವರ ಸಮಸ್ತ ಕೃತ್ಯವನ್ನು ನೋಡುತ್ತಾನೆ. ಆತನು ಪರಮಾತ್ಮನಾಗಿರುವದರಿಂದ ಆತನನ್ನು ನಮ್ಮ ಚರ್ಮದೃಷ್ಟಿಯಿಂದ ನೋಡ ಕೂಡದು. ಆದರೆ ಮೂರ್ಖರು ತಮಗೆ ದೇವರನ್ನು ತೋರಿಸು ಎಂದು ವಾಚಾಟ ಮಾಡುತ್ತಾರೆ. ಶುದ್ಧ ಹೃದಯವುಳ್ಳವರು ದೇವರನ್ನು ಆತ್ಮರೂಪವಾಗಿ ನೋಡುವರು. ಯೇಸು ಕ್ರಿಸ್ತನೇ ದೇವರನ್ನು ಪ್ರಕಟ ಮಾಡಿದ್ದಾನೆ. ಆತನ ಹೊರ್ತು ದೇವರನ್ನು ನೋಡುವವರ್ಯಾರೂ ಇಲ್ಲ.

"ದೇವರನ್ನು ಯಾವನಾದರೂ ಎಂದೂ ನೋಡಲಿಲ್ಲ. ತಂದೆಯ ಎದೆಯಲ್ಲಿರುವ ಒಬ್ಬನಾಗಿ ಹುಟ್ಟಿದ ಮಗನು, ಅವನೇ ಅವನನ್ನು ತಿಳಿಯ ಮಾಡಿದ್ದಾನೆ." (ಯೋಹಾ. ೧, ೧೮.)

---

## ೭. ಉಪಮೆ.

## ಅಪಮರ್ಯಾದೇ ಚಿತ್ರಗಾರನು.

ಒಂದು ಊರಿನಲ್ಲಿ ಒಬ್ಬ ಅರಸನು ರೂಪದಲ್ಲಿ ಬಹು ಸೌಂದರ್ಯವಾಗಿದ್ದನು. ಒಂದು ದಿವಸ ಒಬ್ಬ ಘಟ್ಟಿಗನಾದ ಚಿತ್ರಗಾರನು ಅರಸನ ಅರಮನೆಯ ಹೆಬ್ಬಾಗಲ ಬಳಿಯ ಬರಲು, ಆ ವರ್ತಮಾನವು ಅರಸನಿಗೆ ಮುಟ್ಟಲು, ಆ ಚಿತ್ರಗಾರನನ್ನು ಕರಿಯ ಬೇಕೆಂಬ ಅಪ್ಪಣೆ ಆಯಿತು. ಆಗಲು ಅರಸನು ಚಿತ್ರಗಾರನನ್ನು ನೋಡಿ, ಅವನಿಗೆ, ತನ್ನ ಚಿತ್ರವನ್ನು ಚಂದಾಗಿ ಬರದರೆ ಭಾರಿ ಇನಾಮು ಕೊಡುವೆನೆಂದು, ವಾಗ್ದತ್ತ ಮಾಡಿದನು. ಅದಕ್ಕೆ ಚಿತ್ರಗಾರನು ಅರಸನಿಗೆ—ಒಳ್ಳೇದು ಸ್ವಾಮಿ, ಒಡೆಯರ ಅಪ್ಪಣೆ ಪ್ರಕಾರ ನಡ ಕೊಳ್ಳುವೆನೆಂದು, ಹೇಳಿ, ಹೋಗಿ ಬಿಟ್ಟನು. ನಾಲ್ಕು ದಿವಸದ ಬಳಿಕ ಚಿತ್ರಗಾರನು ಪುನಹ ದರಬಾರಿಗೆ ಬರಲು, ಅರಸನು ಅವನಿಗೆ—ತನ್ನ ಚಿತ್ರವನ್ನು ಬರದು ತಂದಿಯಾ? ಎಂದು ಕೇಳಿದನು. ಅದಕ್ಕವನು—ಹೌದು ಸ್ವಾಮಿ, ತಮ್ಮ ಚಿತ್ರವನ್ನು ಬರದು ತಂದಿದ್ಧೇನೆಂದು, ಒಬ್ಬ ನೀಚ ಕುರೂಪಿಯ ಚಿತ್ರವನ್ನು ತೋರಿಸಿ, ಇದು ತಮ್ಮ ಚಿತ್ರವೆಂದು ಹೇಳಿದನು. ಅರಸನು ಆ ಭಿನ್ನ ರೂಪದ

ಚಿತ್ರವನ್ನು ನೋಡಿ, ಅದು ತನ್ನ ಚಿತ್ರವಲ್ಲವೆಂದು ತಿಳಿದು, ಮನಸ್ತಾಪ ಗೊಂಡು ಆ ಮನುಷ್ಯನಿಗೆ ಭಾರಿ ಶಿಕ್ಷೆ ಕೊಡದಿದ್ದರೆ, ತನ್ನ ಮಹಿಮೆಯು ಲೋಕದಲ್ಲಿ ಅನರ್ಥವಾಗಿ ಹೋಗುವದು, ಮತ್ತು ಇನ್ನು ಮುಂದೆ ತನ್ನ ಅಧಿಕಾರವು ನಡಿಯದು ಎಂಬ ವಿಚಾರದಿಂದ ಶಿಪಾಯಿಯರನ್ನು ಕರದು, ಆ ದುಷ್ಟ ಚಿತ್ರಗಾರನನ್ನು ಶಿರಚ್ಛೇದನ ಮಾಡ ಬೇಕೆಂದು ಅಪ್ಪಣೆ ಕೊಟ್ಟನು.

## ತಾತ್ಪರ್ಯವು.

ಈ ಪ್ರಕಾರ ಜನರು ಉತ್ತಮವಾದ ದಿವ್ಯ ಗುಣದಿಂದ ಸೌಂದರ್ಯವಾಗಿ ಪ್ರಕಾಶಿಸುವ ದೇವರ ಚಿತ್ರಗಳನ್ನೂ ಮೂರ್ತಿಗಳನ್ನೂ ನಾನಾ ರೀತಿಯಾಗಿ ಕಲ್ಪಿಸುತ್ತಾರೆ. ಹ್ಯಾಗಂದರೆ: ದೇವರಿಗೆ ವಾನರರೂಪ, ಲಿಂಗರೂಪ, ಕಾಮಾತುರದಿಂದ ಸ್ತ್ರೀಲೋಲರಾದ ಮನುಷ್ಯರ ರೂಪ, ಸ್ತ್ರೀರೂಪ, ಇತ್ಯಾದಿ ಆಕಾರಗಳನ್ನು ಹಚ್ಚಿ ದೇವರುಗಳೆಂದು, ಅವುಗಳನ್ನು ಪೂಜಿಸುತ್ತಾರೆ. ಮತ್ತು ಅವುಗಳಿಗೆ ರಥೋತ್ಸವಗಳನ್ನು ಮಾಡಿ, ಬಹು ಸಂತೋಷ ಪಡುತ್ತಾರೆ. ಹೀಗೆ ಮಾಡುವದರಿಂದ ದೇವರ ಕೃಪಾಕಟಾಕ್ಷ ಉಂಟಾಗುತ್ತದೆಂದು ನೆನಸುತ್ತಾರೆ. ಆದರೆ ಅರಸನು ತನ್ನ ರೂಪವನ್ನು ಭಿನ್ನ ಮಾಡಿದ್ದಕ್ಕೆ ಕೋಪಿಸಿ ಕೊಂಡು ಶಿಕ್ಷೆ ಕೊಟ್ಟರೆ, ಸ

ರ್ವತ್ರಾಣಿಯಾದ ಜಗನ್ನಿರ್ಮಾಣಿಕನನ್ನು ಮೃಗ ಇತ್ಯಾದಿ ಹೀನ ಜೀವಿಗಳಿಗೆ ಸಮಾನ ಮಾಡಿದರೆ, ಆತನು ಕೋಪಿಸಿ ಶಿಕ್ಷೆ ಕೊಡದೆ ಬಿಡುವನೇ? ಈ ಮೂರ್ತಿಪೂಜೆಗಳಿಂದ ದೇವರಿಗೆ ನಿಂದೆ ಮಾಡಿದ ದೋಷ ಉಂಟಾಗುವದು; ಅದು ಮಹಾ ದೊಡ್ಡ ಪಾಪವು. ಯಾಕಂದರೆ ದೇವರು ಆತ್ಮವಾಗಿದ್ದಾನೆ; ಆತನಿಗೆ ಜಡ ಆಕೃತಿ ಇಲ್ಲ. ಆತನು ವಾಯುವಿನಂತೆ ಕಣ್ಣಿಗೆ ಕಾಣದವನಾಗಿರುವದರಿಂದ ಆತನಿಗೆ ಯಾವ ರೂಪವಾದರೂ ಕೊಡುವದು ಅಸಾಧ್ಯವಾಗಿದೆ. ಹೀಗಿದ್ದರೂ ಈ ಹಿಂದುಸ್ಥಾನದಲ್ಲಿ ಅರಸರ ಅರಸನಾದ ದೇವರಿಗೆ ನಾನಾ ರೂಪದಿಂದ ಅವಮಾನ ಮಾಡುತ್ತಾರೆ.

"ಲಯವಿಲ್ಲದ ದೇವರ ಮಹಿಮೆಯನ್ನು ಲಯವಾಗುವ ನರ ಪಕ್ಷಿ ಚತುಷ್ಪಾದ ಕ್ರಿಮಿಗಳಿಗೆ ಸಮಾನ ರೂಪವಾಗಿ ಮಾರ್ಪಡಿಸಿದರು." (ರೋಮಾ. ೧, ೨೩.)

---

## ೮. ಉಪಮೆ.

## ದುಃಸ್ವಪ್ನ.

ಒಬ್ಬ ಒಕ್ಕಲಿಗನು ಹೊಲದಲ್ಲಿ ಇಡೀ ದಿವಸ ಕೆಲಸ ಮಾಡಿ, ಸಂಜೆಗೆ ಮನೆಗೆ ಬಂದು, ಬಹಳ ಹಶುವುಳ್ಳವನಾಗಿದ್ದದ

ರಿಂದ ಕೈ ಊರಿ ಹೊಟ್ಟೆ ತುಂಬಾ ಉಂಡು, ತತ್‌ಕ್ಷಣವೇ ನಿದ್ರೆ ಮಾಡ ಹೋದನು. ಅವನು ಭೋಜಿಸಿದ ಅನ್ನವು ಜೀರ್ಣವಾಗದ ಕಾರಣ, ಅವನಿಗೆ ಸೌಖ್ಯವಾದ ನಿದ್ರೆ ಬೀಳದೆ, ರಾತ್ರೆ ಎಲ್ಲಾ ಭಯಂಕರವಾದ ಸ್ವಪ್ನಗಳಿಂದ ಉಪದ್ರ ಪಡುತ್ತಾ ಇದ್ದನು. ಅಂದರೆ, ಅವನಿಗೆ ಒಮ್ಮೆ ದೊಡ್ಡ ಆನೆ ಕಾಣಿಸಿಕೊಂಡು ಅವನ ಮೇಲೆ ಹಾಯುತ್ತಿತ್ತು, ಒಮ್ಮೆ ವಿಕಾರ ರೂಪವುಳ್ಳ ಸ್ತ್ರೀಯು ಬಂದು ಅವನ ಎದೆಯ ಮೇಲೆ ಕುಂಡ್ರುತ್ತಿದ್ದಳು, ಮತ್ತೊಮ್ಮೆ ಹುಲಿ ಬಂದು ಅವನ್ನ ಹಿಡಿಯುತ್ತಿತ್ತು. ಈ ಪ್ರಕಾರ ನಾನಾ ಭೀಕರವಾದ ಸ್ವಪ್ನಗಳಿಂದ ಅವನು ರಾತ್ರೆಯೆಲ್ಲಾ ತೊಂದರೆ ಪಡುತ್ತಿದ್ದನು. ಹೀಗೆ ಬೆಳಗಾದ ಮೇಲೆ ಅವನು ಎದ್ದು ಸಂಭವಿಸಿದ ವೃತ್ತಾಂತವನ್ನು ತನ್ನ ಹೆಂಡತಿಗೆ ಹೇಳಿ, ಮನಸ್ಸಿನಲ್ಲಿ ಕಳವಳ ಪಟ್ಟು, ಇದೆಲ್ಲಾ ಗಣಪತಿ ದೇವರ ಉಪದ್ರವೆಂದೂ ಆ ಗಣಪತಿಗೆ ಒಂದು ಮಹಾಪೂಜೆ ಮಾಡಿಸ ಬೇಕೆಂದೂ ಮನೋನಿರ್ಧಾರ ಮಾಡಿ ಕೊಂಡು, ಒಬ್ಬ ಸಾವಕಾರನಿಂದ ೧೦೦ ರೂಪಾಯಿ ಸಾಲ ತೆಕ್ಕೊಂಡು, ಗಣಪತೀ ಗುಡಿಗೆ ಹೋಗಿ, ಮಹಾಪೂಜೆ ಮಾಡಿಸಿದನು. ಹೀಗಾದ ಮೇಲೆ ಆ ವರುಷ ಅವನ ಹೊಲದಲ್ಲಿ ಒಳ್ಳೆ ಬೆಳೆ ಆಗದ ಕಾರಣ, ಅವನು ಗಣಪತೀ ಪೂಜೆಗಾಗಿ ಮಾಡಿ

ದ ಸಾಲವನ್ನು ತೀರಿಸಲಾರದೆ, ಆ ಊರನ್ನು ಬಿಟ್ಟು ಓಡಿ ಹೋಗ ಬೇಕಾಯಿತು.

### ತಾತ್ಪರ್ಯವು.

ಹೀಗೆಯೇ ಅವಿವೇಕರಾದ ಜನರು ಸ್ವಪ್ನಗಳನ್ನು ಕಂಡರೆ, ಅವು ನಿಜವೆಂದು ನೆನಸುತ್ತಾರೆ. ಅನೇಕರು ಅವರಿಗೆ ಏನಾದರೂ ಸ್ವಲ್ಪ ಜ್ವರವಾಗಲಿ, ಹೊಟ್ಟೆ ಬೇನೆಯಾಗಲಿ, ಬೇರೆ ಯಾವ ಸಂಕಟವಾಗಲಿ, ಅಥವಾ ದುಃಸ್ವಪ್ನ ಇತ್ಯಾದಿ ವ್ಯಾಧಿ ಉಪದ್ರಗಳು ಸಂಭವಿಸಿದರೆ, ಅದು ಗಣಪತಿ, ಮಾರಿಯಮ್ಮ, ಕಾಳಮ್ಮ, ಕಾಳಭೈರವ, ಬ್ರಹ್ಮರಾಕ್ಷಸ, ಗುಳಿಗ, ಕಲ್ಲುರುಟ್ಟಿ, ದೆವ್ವ, ಪಂಜುರ್ಲಿ ಇತ್ಯಾದಿ ದೆವ್ವಗಳಿಂದುಂಟಾಯಿತೆಂದು ನಂಬಿ, ಅವುಗಳಿಗೆ ಮಹಾಪೂಜೆ, ಕೋಲ ಇತ್ಯಾದಿ ಆಚರಣೆಗಳನ್ನು ಮಾಡಿ, ಅನೇಕ ಕುರಿ, ಕೋಣ, ಕೋಳಿ ಇತ್ಯಾದಿ ಜೀವಿಗಳನ್ನು ಬಲಿಯಾಗಿ ಅರ್ಪಿಸಿ, ಅಪರಿಮಿತ ಹಣ ವೆಚ್ಚ ಮಾಡಿ ಬಡವರಾಗುತ್ತಾರೆ. ಇಂಥಾ ಪೂಜೆಗಳಿಂದ ಜನರು ಬಡವರಾಗುವದು ಮಾತ್ರವಲ್ಲದೆ, ಸರ್ವತ್ರಾಣಿಯಾದ ತಮ್ಮ ನಿರ್ಮಾಣಿಕನಾದ ದೇವರ ಕೋಪಕ್ಕೂ ಶಾಪಕ್ಕೂ ಗುರಿಯಾಗುತ್ತಾರೆ ಹೊರ್ತು, ತಮ್ಮ ಪಾಪಗಳ ದೆಸೆಯಿಂದ ತಮಗೆ ಕೇಡು ಕಷ್ಟಗಳು ಆವರಿಸಿ ಕೊಳ್ಳುತ್ತವೆಂದು ವಿಚಾರದಿಂದ ಗ್ರಹಿಸಿ ಕೊಳ್ಳುವದಿಲ್ಲ.

"ಹಿಂದಟ್ಟುವವನಿಲ್ಲದೆ, ದುಷ್ಟರು ಓಡಿ ಹೋಗುತ್ತಾರೆ; ಆ ದರೆ ನೀತಿವಂತರು ಪ್ರಾಯ ಸಿಂಹದ ಹಾಗೆ ಭರವಸವಾಗಿದ್ಧಾರೆ. (ಸಾಮತಿ. ೨೮, ೧.)

---

## ೯. ಉಪಮೆ.

## ವಿರಹ.

ಒಬ್ಬ ಧೊರೆಗೆ ಒಂದು ಶುನಿ (ಹೆಣ್ಣು ನಾಯಿ) ಇತ್ತು; ಅದಕ್ಕೆ ಎರಡು ಮರಿಗಳಿದ್ದವು. ಅವುಗಳನ್ನು ಆ ಶುನಿಯು ಬಹು ಮಮತೆಯಿಂದ ಸಂರಕ್ಷಣೆ ಮಾಡುತ್ತಾ ಬರುವಾಗ್ಯೆ, ಅದರ ಧನಿಯು ಅದನ್ನು ಕಂಡು, ತನಗೆ ಮರಿಗಳು ಬೇಡ, ನಾಯಿ ಮಾತ್ರ ಇದ್ದರೆ ಸಾಕು ಎಂದು, ಆ ಮರಿಗಳನ್ನು ಬೇರೆಯವರಿಗೆ ಕೊಟ್ಟು ಬಿಟ್ಟನು. ಆಗಲಾ ಹೆಣ್ಣು ನಾಯಿಯು ತನ್ನ ಮರಿಗಳು ಕಾಣದೆ ಹೋದದರಿಂದ, ಬಹು ದುಃಖದ ಕುರುಹು ತೋರಿಸಿ, ಎಲ್ಲೆಲ್ಲಿಯೂ ಹುಡುಕುತ್ತಾ ಇದ್ದು, ಕಡೆಗೆ ಎರಡು ನರಿಮರಿಗಳನ್ನು ಕಂಡು, ಅವುಗಳನ್ನು ತನ್ನ ಸ್ವಂತ ಮರಿಗಳಂತೆ ಸ್ವೀಕರಿಸಿ, ಅವುಗಳಿಗೆ ತನ್ನ ಮೊಲೆಯುಣಿಸಿ, ಅವುಗಳ ಸಂಗಡ ಮಲಗಿ ಕೊಂಡು, ಅವುಗಳನ್ನು ಬಹು ಜಾ

ಗ್ರತೆಯಿಂದ ಕಾಪಾಡುತ್ತಾ, ಅವುಗಳೊಡನೆ ಆಡುತ್ತಾ ಇದ್ದು, ಯಾರಾದರೂ ಅವುಗಳನ್ನು ಮುಟ್ಟಿದರೆ ಅವರಿಗೆ ಕಚ್ಚುವದಕ್ಕೆ ಹೋಗುವದು.

## ತಾತ್ಪರ್ಯವು.

ಈ ಪ್ರಕಾರ ಆ ಕುನಿಯು ತನ್ನ ಸ್ವಂತ ಮರಿಗಳನ್ನು ಕಳಕೊಂಡರೂ ಅದರ ಮಾತೃಪ್ರೀತಿಯು ಹೋಗಲಿಲ್ಲ. ಅದು ಮಾತೃಪ್ರೀತಿಯಿಂದ ಪ್ರೇರೇಪಿಸಲ್ಪಟ್ಟು ಸ್ವಂತ ಮರಿಗಳ ವಿಯೋಗದ ದುಃಖ ಹತ್ತಿ, ಅದು ಎರಡು ನರಿಮರಿಗಳನ್ನು ಸಾಕುತ್ತಿತ್ತು. ಹೇಗೆಯೋ ತಾಯಿಯ ಸ್ವಭಾವಿಕ ಮಮತೆಯ ಆಕರ್ಷಣೆಯು ಹ್ಯಾಗೆ ಮಕ್ಕಳ ಕಡೆಗೆ ಎಳಿಯುತ್ತದೋ, ಹಾಗೆಯೇ ಮನುಷ್ಯರ ಅಂತಃಕರಣದ ಆಕರ್ಷಣೆಯು ದೇವರ ಕಡೆಗೆ ಎಳಿಯುತ್ತದೆ. ಆತನ ಪರಿಚಿತಿಯೂ ಆತನ ಐಕ್ಯವೂ ಆಗದ ಹೊರ್ತು, ಮನುಷ್ಯನಿಗೆ ತೃಪ್ತಿ ಆಗಲಾರದು. ಪಾಪದ ದೆಸೆಯಿಂದಲೇ ದೇವರಿಗೂ ಮನುಷ್ಯರಿಗೂ ವಿಯೋಗವಾದ್ದಾಯಿತು. ಆದ ಕಾರಣ ಮನುಷ್ಯರ ಹೃದಯದಲ್ಲಿ ಸಮಾಧಾನವೂ ಸುಖವೂ ಇಲ್ಲದೆ ಹೋದವು. ಅನೇಕರು ದೇವರ ವಿರಹದಿಂದ ಆತನನ್ನು ನಾನಾ ರೀತಿಯಾಗಿ ಹುಡುಕುತ್ತಾರೆ. ಆದರೆ ಪಾಪವು ಅವರಿಗೆ ಸವಿಯಾಗಿ ಕಂಡದರಿಂದ ದೇವರ ಮರ್ಮವು ಅವರಿಗೆ ಶಿಕ್ಕುವದಿ

ಲ್ಲ. ಆದ ಕಾರಣ ಅವರು ನಿರಾಶೆಯುಳ್ಳವರಾಗಿ ನಿರ್ಜೀವಿಯಾದ ಪಾಷಾಣ ಇತ್ಯಾದಿ ವಸ್ತುಗಳಿಂದ ದೇವರುಗಳನ್ನು ಮಾಡಿಕೊಂಡು ಆರಾಧಿಸುತ್ತಾರೆ. ಮೇಲೆ ಹೇಳಿದ ಪ್ರಕಾರ ಆ ನಾಯಿಯು ಮಾತೃಮಮತೆಯನ್ನು ಆ ನರಿಮರಿಗಳ ಮೇಲೆ ಹ್ಯಾಗೆ ಇಟ್ಟಿತೋ, ಹಾಗೆಯೇ ಅನೇಕರು ಕಲ್ಲುದೇವರುಗಳ ಮೇಲೆ ಇಡುತ್ತಾರೆ. ಆದದರಿಂದ ಆ ಕಲ್ಲುದೇವರುಗಳ ಭಕ್ತರು ಆ ನರಿಮರಿಗಳ ತಾಯಿಯ ಹಾಗೆಯೇ ಇರುತ್ತಾರೆ.

ದೇವರ ದರ್ಶನವಾಗಿ ಮಾನವರ ತೃಪ್ತಿ ಆಗುವದಕ್ಕೆ ದೊಡ್ಡ ಅಡ್ಡಿಯುಂಟೆಂಬುವದಕ್ಕೆ ಸಂಶಯವಿಲ್ಲ; ಆ ಅಡ್ಡಿಯು ಪಾಪವೇ! ಅಂಥಾ ಅಡ್ಡಿಯು ಮನುಷ್ಯರ ಯಾವ ಪ್ರಯತ್ನದಿಂದಲಾದರೂ ಪರಿಹಾರವಾಗದು. ಆದ ಕಾರಣ ಪರಮ ದಯಾನಿಧಿ ಆಗಿರುವ ದೇವರು ಆ ಅಡ್ಡಿಯು ಪರಿಹರಿಸಲ್ಪಡುವ ಹಾಗೆ, ಲೋಕರಕ್ಷಕನಾದ ಯೇಸು ಕ್ರಿಸ್ತನನ್ನು ಕಳುಹಿಸಿದ್ದಾನೆ. ಆತನ ಮೂಲವಾಗಿ ಪರಿಶುದ್ಧ ದೇವರಿಗೂ ಅಪವಿತ್ರ ಮನುಷ್ಯನಿಗೂ ಸಂಗತಿಯಾಗುತ್ತದೆ; ಮತ್ತು ದೇವರ ಕೃಪೆಯಿಂದಲೇ ದುಃಖವು ನಿಗ್ರಹವಾಗುತ್ತದೆ; ಹೀಗಾಗಿ ಮನುಷ್ಯರಾತ್ಮಾನಂದವಾಗುತ್ತದೆ.

"(ವಿಗ್ರಹಾರಾಧಕನು) ಬೂದಿಯನ್ನು ತಿನ್ನುತ್ತಾನೆ; ಮೋಸವಾದ ಹೃದಯವು ಅವನನ್ನು ದಾರಿಯಾಗ ಮಾಡಿತು." (ಯೆಶಾಯ. ೪೪, ೨೦.)

---

## ೧೦. ಉಪಮೆ.

## ಘಾಳಿಪಟವು.

ಒಬ್ಬ ಹಳ್ಳಿ ಹುಡುಗನು ತಿರುಗಾಡುತ್ತಾ ಇರಲು, ಒಬ್ಬ ಹುಡುಗನು ಒಂದು ಘಾಳಿಪಟವನ್ನು ಮೇಲೆ ಹಾರಿಸುವದನ್ನು ಕಂಡು, ತಾನು ಸಹಾ ಘಾಳಿಪಟವನ್ನು ಹಾರಿಸಿ ಆಡ ಬೇಕೆಂದು ಪೇಟೆಗೆ ಹೋಗಿ, ಒಂದು ಘಾಳಿಪಟವನ್ನು ಕೊಂಡು ಕೊಂಡನು. ಆದರೆ ಅದನ್ನು ಘಾಳಿಗೆ ಬಿಟ್ಟು ಮೇಲಕ್ಕೇರಿಸುವದು ಹ್ಯಾಗೆಂಬ ಯುಕ್ತಿಯನ್ನು ತಿಳಿಯದೆ, ಅವನು ಅದಕ್ಕೆ ಒಂದು ಕಲ್ಲನ್ನು ಕಟ್ಟಿ, ಅದನ್ನು ಘಾಳಿಯಿಂದ ಮೇಲೆ ಹಾರಿಸುವದಕ್ಕೆ ಪ್ರಯತ್ನ ಮಾಡಿದನು. ಅವನು ಎಷ್ಟು ಪ್ರಯತ್ನ ಮಾಡಿದ್ದಾಗ್ಯೂ, ಆ ಪಟವು ಮೇಲೆ ಹೋಗದೆ ಪದೇ ಪದೇ ಬಿದ್ದು ಹರಿದು ಹೋಯಿತು.

### ತಾತ್ಪರ್ಯವು.

ಹೀಗೆಯೇ ಮನುಷ್ಯರ ಆತ್ಮವು ಘಾಳಿಪಟದ ಹಾಗಿರುತ್ತದೆ. ಅದು ಪರಲೋಕಕ್ಕೆ ಮೇಲೆ ಮೇಲೆ ಏರಿ ದೇವರ ಕಡೆಗೆ ಹೋಗ ಬೇಕೆಂಬದೇ ಪರಮಾತ್ಮನ ಚಿತ್ತವು; ಆದರೆ ಅನೇಕರು ಮೇಲೆ ಹೇಳಿದ ಹುಡುಗನ ಹಾಗೆಯೇ ತಮ್ಮ ಆತ್ಮಗಳಿಗೆ ಕಲ್ಲುಗಳ ದೇ

ವರನ್ನು ಕಟ್ಟುವದರಿಂದ, ತಮ್ಮಾತ್ಮವು ಆ ಕಲ್ಲುದೇವರುಗಳ ಪೂಜೆಯಲ್ಲಿ ಸುರಿಸಿರುತ್ತಾರೆ; ಆದದರಿಂದ ಅದು ದೇವರ ಕಡೆಗೇರುವದಿಲ್ಲ. ಮತ್ತು ಅವರು ಅವಿಚಾರದಲ್ಲಿ ಮಗ್ನರಾಗಿ, ನಾಶದ ಮಾರ್ಗದಲ್ಲಿ ನಡಿಯುತ್ತಾರೆ. ಅನೇಕರು, ಕಲ್ಲುದೇವರುಗಳ ಪೂಜೆಯು ದೇವರ ಕಡೆಗೆ ಹೋಗುವ ಪಾವಟಿಗೆಯಾಗಿದೆಂದು ಹೇಳುತ್ತಾರೆ; ಆದರೆ ಅದು ಹಿಂಜರಿದು ಕೆಳಗೆ ನರಕಕ್ಕೆ ಹೋಗುವ ನಿಚ್ಚಣಿಗೆಯಾಗಿದೆಂದು ಅರಿಯದೆ ತಮ್ಮನ್ನು ಆ ನರಕಾಗ್ನಿಯಲ್ಲಿ ಬೀಳಗೊಡಿಸುತ್ತಾರೆ.

ಇದೇ ಪ್ರಕಾರ ಯಾವನು ಈ ಲೋಕವನ್ನು ಹೆಚ್ಚಾಗಿ ಪ್ರೀತಿ ಮಾಡುತ್ತಾನೋ, ಅವನಾತ್ಮವು ಮೇಲೆ ದೇವರ ಕಡೆಗೆ ಹೋಗ ಕೂಡದು. ದೇವರ ವಾಕ್ಯದಲ್ಲಿ ದ್ರವ್ಯಾಶೆಯೂ ವಿಗ್ರಹಾರಾಧನೆಯೂ ಒಂದೇ ಸ್ವಭಾವವುಳ್ಳದೆಂದು ಹೇಳಿದೆ. ಯಾವನು ಈ ಲೋಕಕ್ಕೆ ಮೆಚ್ಚಿ ಅದರ ಮಾಯೆಯಾದ ದ್ರವ್ಯಾದಿ ವಿಷಯಭೋಗದಲ್ಲಿ ಮನಸ್ಸಿಡುತ್ತಾನೋ, ಅವನು ದೇವರಿಗೆ ಮೆಚ್ಚಿಸ ಕೂಡದು. ಯಾವನು ಲೋಕಾಭಿಮಾನವನ್ನೂ ಲೋಕದ ಡಂಭಾಚಾರವನ್ನೂ ಅಪೇಕ್ಷಿಸುತ್ತಾನೋ, ಅಥವಾ ಜಾತಿ ಇತ್ಯಾದಿ ಲೋಕಸಂಬಂಧವಾದ ಮಾರ್ಗದಲ್ಲಿ ನಡಿಯುವ ಆಶೆಯುಳ್ಳವನಾಗಿರುತ್ತಾನೋ, ಅವನು ಹಿಂದು ಆಗಲಿ ಕ್ರೈಸ್ತನಾಗಲಿ, ಯಾವ ಮತಸ್ಥನಾಗಲಿ, ಅಂಥವನಾತ್ಮಕ್ಕೆ ಕಲ್ಲು ಕಟ್ಟಿ ಅದೆ. ಆದ ಕಾರಣ

ಅಂಥವನು ದೇವರ ಕಡೆಗೆ ಹೋಗ ಕೂಡದೆಂಬುವದು ನಿಶ್ಚಯ ವೇ. ಆದರೆ ದೇವರ ಮೇಲೆ ಆಶೆಯುಳ್ಳವರು ಭಾಗ್ಯವಂತರು.

"ಯೆಹೋವನನ್ನು ಕಾದು ಕೊಳ್ಳುವವರು, ಹೊಸ ಬಲವನ್ನು ತಂದು ಕೊಳ್ಳುವರು, ಹದ್ದುಗಳಂತೆ ರೆಕ್ಕೆಗಳಿಂದ ಏರುವರು, ದಣಿಯದೆ ಓಡುವರು, ಆಯಾಸ ಪಡದೆ ನಡಿಯುವರು." (ಯೆಶಾ. ೪೦, ೩೧.)

---

## ೧೧. ಉಪಮೆ.

## ದುರ್ಮಾರ್ಗಿಯಾದ ಉಪಾಧ್ಯಾಯನು.

ಒಬ್ಬ ಶಾಲೆಯ ಪಂತೋಜಿಯು ಬಹು ಕೆಟ್ಟ ನಡತೆಯವನಾಗಿದ್ದನು; ಅಂದರೆ ಅವನು ಮದ್ಯಪಾನಿಯೂ ವ್ಯಭಿಚಾರಿಯೂ ದುರ್ವ್ಯಸನವುಳ್ಳವನೂ ಆಗಿದ್ದನು. ಅವನ ಸುಳ್ಳಿಗೂ ಮೋಸಕ್ಕೂ ಕಪಟಕ್ಕೂ ಅಂತ್ಯವಿರಲಿಲ್ಲ. ಈ ಪ್ರಕಾರದ ಅವನ ಕೆಟ್ಟ ನಡತೆಗಾಗಿ ಕೆಲವು ಉತ್ತಮ ಜನರು ಅವನ ಶಾಲೆಯಲ್ಲಿ ವಿದ್ಯ ಕಲಿಯುವ ಹುಡುಗರ ತಂದೆತಾಯಿಗಳಿಗೆ—ನೀವು ನಿಮ್ಮ ಹುಡುಗರನ್ನು ಆ ದುಷ್ಟನ ಶಾಲೆಗೆ ಕಳುಹಿಸ ಬೇಡಿರಿ; ಯಾಕಂದರೆ, ಅವರು ಅವನ ಹಾಗೆಯೇ ಆಗಿ ಕೆಟ್ಟು ಹೋಗುವರು; ಮತ್ತು ಅವನ ಸಂಗತಿಯಿಂ

ದಲೂ ಬೋಧನೆಯಿಂದಲೂ ಅವರಿಗೆ ಅವನ ದುರ್ಗುಣವು ಅಂಟಿ ಕೊಳ್ಳುವದೆಂಬುವದಕ್ಕೆ ಸಂಶಯವಿಲ್ಲವೆಂದು ಹೇಳಿದರು. ಆದಾಗ್ಯೂ ಆ ಹುಡುಗರ ಹೆತ್ತವರು ತಮ್ಮ ಮಕ್ಕಳಿಗಾಗಿ ಏನೂ ಚಿಂತೆ ಮಾಡದೆ, ಆ ಉತ್ತಮರ ಬುದ್ಧಿ ಮಾತನ್ನು ಅಲಕ್ಷ್ಯ ಮಾಡಿದರು. ಹೀಗೆ ಎರಡು ಮೂರು ವರುಷಗಳೊಳಗೆ ಆ ಶಾಲೆಯ ಹುಡುಗರೆಲ್ಲರು ತಮ್ಮ ಉಪಾಧ್ಯಾಯನ ಹಾಗೆ ಪಟಿಂಗರೂ ದುರ್ವ್ಯಸನಿಗಳೂ ಮದ್ಯಪಾನಿಗಳೂ ಆಗಿ ಕೆಟ್ಟು ಹೋದರು.

## ತಾತ್ಪರ್ಯವು.

ಯಥಾರಾಜಾ ತಥಾಪ್ರಜಾ ಎಂಬ ಗಾದೆಗೆ ಯಥಾದೇವ ತಥಾಭಕ್ತ ಎಂಬ ಗಾದೆಯು ಸರಿಯಾಗಿದೆ. ಏನಂದರೆ ಕೃಷ್ಣನು ವ್ಯಭಿಚಾರ ಇತ್ಯಾದಿ ವಿಲಾಸ ಮಾಡಿದನು; ಮತ್ತು ಇಂದ್ರನು ಗೌತಮನ ಹೆಂಡತಿಯನ್ನು ಕೆಡಿಸಿದನು; ವಿಷ್ಣುವು ಇಂದ್ರನ ಹೆಂಡತಿಯನ್ನು ಕೆಡಿಸಿದನು; ಬ್ರಹ್ಮನು ತನ್ನ ಸ್ವಂತ ಮಗಳನ್ನು ಭೋಗಿಸಿದನು. ಕೃಷ್ಣನು ಯುಧಿಷ್ಠಿರನಿಂದ ಸುಳ್ಳು ಹೇಳಿಸಿ ನರಕದರ್ಶನ ಮಾಡಿಸಿದನು. ಮತ್ತು ತಾನು ಶತಕಪಟಿಯಾಗಿದ್ದನು. ಶಿವನು ಭಂಗಿ ಸೇದುವವನೂ ಭಂಗಿಮುಕ್ಕನೂ ಆಗಿದ್ದನು. ಇನ್ನೂ ಅನೇಕ ಇಂಥಾ ಅಸೂಯೆಯ ಆಟಗಳ ವಿಷಯವಾಗಿ ಪು

ರಾಣದಲ್ಲಿ ಬರೆದದೆ. ಇಂಥಾ ದೇವರ ಭಕ್ತರು ಅವರಂತೆಯಾಗಿರುತ್ತಾರೆ. ಅವರು ಕೃಷ್ಣ, ಶಿವ, ಇಂದ್ರ, ಇತ್ಯಾದಿ ದೇವರುಗಳು ಮಾಡಿದ ಕೃತ್ಯಗಳು ಮನುಷ್ಯರಿಗೆ ಕೆಟ್ಟದಾಗಿ ಕಂಡರೂ, ಅವರು ದೇವರಾಗಿದ್ದದರಿಂದ ಅವರು ಮಾಡಿದ ಕೃತ್ಯಗಳು ಪಾಪವೆಂದು ಹೇಳ ಕೂಡದೆಂದು ಹೇಳುತ್ತಾರೆ. ಹ್ಯಾಗಾದರೂ ಕೆಟ್ಟದ್ದು ಕೆಟ್ಟದ್ದೇ ಸರಿ; ನೀಚ ಕೃತ್ಯ ಮಾಡುವವನು ನೀಚನೇ ಸರಿ. ಒಳ್ಳೆ ಮರಗಳಿಗೆ ಒಳ್ಳೆ ಫಲಗಳೂ ಕೆಟ್ಟ ಮರಗಳಿಗೆ ಕೆಟ್ಟ ಫಲಗಳೂ ಆಗುವದು ಪ್ರತ್ಯಕ್ಷವಾಗಿದೆ. ಅದೇ ಪ್ರಕಾರ ದುರ್ಮಾರ್ಗಿಯು ದುಷ್ಟ ಕೃತ್ಯ ಮಾಡುತ್ತಾನೆ; ಸನ್ಮಾರ್ಗಿಯು ಸತ್ಕ್ರಿಯೆ ಮಾಡುತ್ತಾನೆ. ಅರಸನು ಕೆಟ್ಟವನಾದರೆ, ಪ್ರಜೆಗಳು ಸಹಾ ಕೆಟ್ಟವರಾಗುತ್ತಾರೆ. ಅದೇ ಪ್ರಕಾರ ಆ ಕೆಟ್ಟ ದೇವರುಗಳ ಚರಿತ್ರೆಗಳನ್ನು ಜನರು ನಿತ್ಯವಾಗಿ ಕೇಳುವದರಿಂದ ತಮ್ಮ ದೇವರುಗಳ ಹಾಗೆಯೇ ಕುಕರ್ಮಗಳನ್ನು ಮಾಡಲಿಕ್ಕೆ ಧೈರ್ಯ ಪಡುತ್ತಾರೆ. ಮತ್ತು ಅವರು ತಮ್ಮ ದೇವರುಗಳು ಹಾಗೆ ನಡದ ಮೇಲೆ, ತಾವು ಯಾಕೆ ಅವರಂತೆ ನಡಿಯ ಬಾರದೆಂಬ ಆಲೋಚನೆಗಳನ್ನು ಮಾಡುತ್ತಾರೆ. ಇದೇ ಕಾರಣದಿಂದ ಈ ದೇಶದಲ್ಲಿ ಕಪಟ, ಮೋಸ, ವ್ಯಭಿಚಾರ, ವಿಶ್ವಾಸಘಾತಕ, ಅಹಂಕಾರ, ಇತ್ಯಾದಿ ದುರ್ಗುಣಗಳು ಪ್ರಬಲವಾಗಿವೆ.

ಆದರೆ ಯಾರು ನಿಜವಾದ ಸದ್ಗುಣಭರಿತನಾದ ಪರಿಶುದ್ಧ

ದೇವರ ಆಶ್ರಯ ಮಾಡುತ್ತಾರೋ, ಅವರು ಆತನ ಹಾಗೆಯೇ ಒಳ್ಳೆಯವರೂ ಪರಿಶುದ್ಧರೂ ಆಗುತ್ತಾರೆ. ದೇವರ ನಿಜಭಕ್ತರು, ಆತನು ಪರಮ ಪವಿತ್ರನೂ ಸರ್ವಜ್ಞಾನಿಯೂ ದಯವುಳ್ಳವನೂ ಪಾಪದ್ವೇಷಿಯೂ ಆಗಿದ್ದಾನೆಂದು, ತಿಳುಕೊಳ್ಳುತ್ತಾರೆ. ಇದಲ್ಲದೆ ಅವರು ಪಾಪದಿಂದ ಅಗಲಿ, ಜ್ಞಾನೋದಯವೂ ಪರಿಶುದ್ಧತ್ವವೂ ಉಳ್ಳ ಮಾರ್ಗದಲ್ಲಿ ನಡಿಯ ಬೇಕೆಂಬ ನಿರ್ಧಾರ ಮಾಡಿಕೊಳ್ಳುತ್ತಾರೆ.

"ನಾನು ಪರಿಶುದ್ಧನಾಗಿರುವದರಿಂದ, ನೀವೂ ಪರಿಶುದ್ಧರಾಗಿರಿ." (೧ ಪೇತ್ರ. ೧, ೧೬.)

---

## ೧೦. ಉಪಮೆ.

## ದೇವರು ಬಿಡುವನು.

ಒಬ್ಬ ಕಳ್ಳನು ಒಬ್ಬ ಸಾವಕಾರನ ಮನೆ ಹೊಕ್ಕು ಕೆಲವು ಸಾವಿರ ರೂಪಾಯಿ ಕದ್ದು ಕೊಂಡು ಹೋದನು; ಆಗ್ಯೆ ಅವನ ಮೇಲೆ ಫಿರ್ಯಾದಿ ಬಂದಾಗ, ಮಾಮಲೆದಾರನು ಆವನನ್ನು ಹಿಡಿಯುವದಕ್ಕೋಸ್ಕರ ಜವಾನರನ್ನು ಕಳುಹಿಸಲು, ಜನರು ಅವನಿಗೆ—ನೀನು ಇಲ್ಲಿಂದ ಯಾಕೆ ಓಡಿ ಹೋಗುವ

ದಿಲ್ಲ? ಸರಕಾರ ಜವಾನರು ನಿನ್ನನ್ನು ಹುಡುಕುತ್ತಾರೆ; ನೀನು ಶಿಕ್ಕಿ ಬಿದ್ದರೆ, ನಿನಗೆ ಕಠಿಣ ಶಿಕ್ಷೆ ಕೊಡುವರಲ್ಲ! ಅಂದರು. ಅದಕ್ಕೆ ಆ ಕಳ್ಳನು ತನ್ನನ್ನು ಸರಕಾರದವರು ಬಿಡುವರು ಅಂದು, ತಾನು ಕೂತ ಸ್ಥಳದಲ್ಲೇ ಇದ್ದನು. ಅದನ್ನು ನೋಡಿ, ಜನರು ಅವನ ಹುಚ್ಚುತನಕ್ಕಾಗಿ ನೆಗಾಡಿದರು; ಅಷ್ಟರಲ್ಲಿ ಆಳುಗಳು ಬಂದು, ಅವನನ್ನು ಹಿಡಿದು ಕಚೇರಿಗೆ ಒಯಿದರು. ಮತ್ತು ಸರಕಾರದವರು ಅವನಿಗೆ ಶಿರೆಮನೇ ಶಿಕ್ಷೆ ನೇಮಿಸಿದರು.

### ತಾತ್ಪರ್ಯವು.

ಹೀಗೆ ಸರ್ವರು ಪಾಪಿಯಾಗಿದ್ಧಾರೆ, ಮತ್ತು ಒಂದು ದಿವಸ ಮರಣ ಹೊಂದಿದ ತರುವಾಯ ದೇವರ ಮುಂದೆ ಲೆಖ್ಖ ಕೊಡುವದಕ್ಕೆ ನಿಲ್ಲ ಬೇಕಾಗುವದು. ದೇವದೂತನೆಂಬ ಮರಣವು ಒಂದು ಕಾಲದಲ್ಲಿ ಅವರನ್ನು ಹಿಡಿಯ ಬರುವದು. ಅದು ನಮ್ಮಲ್ಲಿ ಒಬ್ಬೊಬ್ಬನನ್ನು ಹಿಡಿಯ ಬರುವ ಕಾಲವು ಯಾವದೆಂದು ನಮ್ಮಲ್ಲಿ ಯಾರಿಗೂ ತಿಳಿಯದು. ಹೀಗಿದ್ದರೂ ಜನರು ಭಯ ಪಡುವದೇ ಇಲ್ಲ. ಮತ್ತು ದೇವರು ಒಂದು ದಿವಸ ನ್ಯಾಯತೀರ್ವಿಕೆಗೆ ಕರದು ಅವರಿಂದ ಲೆಖ್ಖ ಕೇಳುವನೆಂಬ ವಿಷಯದಲ್ಲಿ ಚಿಂತೆ ಮಾಡುವದಿಲ್ಲ. ಜನರಿಗೆ ನ್ಯಾಯತೀರ್ವಿಕೆಯ ವಿಷಯದಲ್ಲಿ ಯಾಕೆ ನೀವು ಚಿಂತೆ ಮಾಡುವದಿಲ್ಲವೆಂದು ಕೇಳಿದರೆ, ಅವ

ರು, ದೇವರು ಕರುಣಾವುಳ್ಳವನಾಗಿರುವದರಿಂದ ತಮ್ಮನ್ನು ನಾಶನದಿಂದ ಬಿಡುಗಡೆ ಮಾಡುವನೆಂದು ಉತ್ತರ ಕೊಡುತ್ತಾರೆ. ಆದರೆ ಹೀಗೆ ಆಡುವ ಮಾತು ವ್ಯರ್ಥವಾಗಿದೆ. ಯಾಕಂದರೆ, ದೇವರು ನೀತಿಯುಳ್ಳ ಅರಸನಾಗಿರುವದರಿಂದ ಆತನು ನೀತಿಯ ಪ್ರಕಾರ ಪಾಪಿಗಳನ್ನು ನ್ಯಾಯ ತೀರಿಸಿ, ಅವರಿಗೆ ನರಕಶಿಕ್ಷೆ ಕೊಡುವನು. ದೇವರು ತನ್ನ ಪರಿಶುದ್ಧ ನ್ಯಾಯಪ್ರಮಾಣದ ಪ್ರಕಾರ ಅಪರಾಧಿಗಳನ್ನು ಶಿಕ್ಷೆ ಕೊಡದೆ ಬಿಡ ಕೂಡದು; ಅವರನ್ನು ಬಿಟ್ಟರೆ ಅದು ಆತನ ಪರಿಶುದ್ಧ ನೀತಿಗೆ ವಿರೋಧವಾಗಿರುವದು. ಆದ ಕಾರಣ ಪಾಪಿಷ್ಟರಾದ ಸುಳ್ಳುಗಾರರೂ ಮೋಸಗಾರರೂ ವ್ಯಭಿಚಾರಿಗಳೂ ವಿಗ್ರಹಾರಾಧಕರೂ ನರಹತ್ಯಗಾರರೂ ಇತ್ಯಾದಿ ಅಕ್ರಮಗಾರರು, ದೇವರು ತಮ್ಮನ್ನು ಕ್ಷಮಿಸಿ ಬಿಡುವನು ಅಂದರೆ, ಅದು ಹುಚ್ಚು ಮಾತಾಗಿರುವದು. ದೇವರ ಪರಿಶುದ್ಧ ನೇಮವು ಹಾಗೆಯಾಗ ಕೂಡದು; ಆದದರಿಂದ ದೇವರು ಪಾಪಿಷ್ಟರನ್ನು ಬಿಡುಗಡೆ ಮಾಡಿ ರಕ್ಷಿಸುವದಕ್ಕೆ ಒಂದು ಉಪಾಯ ಮಾಡಿದ್ದಾನೆ. ಆ ಉಪಾಯಕ್ಕೆ ಅನುಸರಿಸಿ ನಡದರೆ ಮಾತ್ರ ಪಾಪಿಷ್ಟರು ರಕ್ಷಿಸಲ್ಪಡುವರು. ಆ ಉಪಾಯ ಯಾವದೆಂದರೆ: ದೇವರು ಬಹು ಕರುಣದಿಂದ ರಕ್ಷಕನಾದ ಯೇಸು ಕ್ರಿಸ್ತನನ್ನು ಕಳುಹಿಸಿದನು; ಆತನು ದೇವರ ಪರಿಶುದ್ಧ ನ್ಯಾಯಪ್ರಮಾಣವನ್ನು ಪೂರೈಸುವ ಹಾಗೆ, ತಾನೇ ಪಾಪಿಷ್ಟರ ಅನ್ಯಾಯ ಅಕ್ರಮಗಳ ಹೊರೆ

ಯನ್ನು ಹೊತ್ತು ಕೊಂಡು, ಅವರಿಗೆ ಬರ ತಕ್ಕ ದುಃಖ ಶ್ರಮೆಗ ಳನ್ನು ತಾನೇ ಅನುಭವಿಸಿ, ಅವರ ರಕ್ಷಣೆಗಾಗಿ ತನ್ನ ಪ್ರಾಣವ ನ್ನು ಕೊಟ್ಟನು. ಆದ ಕಾರಣ ಯಾವನು ತನ್ನ ಪಾಪಕ್ಕಾಗಿ ದುಃಖ ಪಟ್ಟು ಯೇಸುವಿನಲ್ಲಿ ವಿಶ್ವಾಸವಿಡುತ್ತಾನೋ, ಅವನನ್ನು ದೇವ ರು ಸಂತೋಷದಿಂದ ಬಿಡುಗಡೆ ಮಾಡುತ್ತಾನೆ. ಹೀಗೆ ಪರಿಶುದ್ಧ ನೂ ದಯೆವುಳ್ಳವನೂ ಆಗಿರುವ ದೇವರು ಪಾಪಿಷ್ಠರನ್ನು ಯೇ ಸುವಿನ ಮೂಲಕವಾಗಿ ಮಾತ್ರ ಬಿಡುಗಡೆ ಮಾಡಿ ರಕ್ಷಿಸುತ್ತಾನೆ ಹೊರ್ತು, ಬೇರೆ ಉಪಾಯದಿಂದ ರಕ್ಷಿಸ ಕೂಡದು. ಓ ಜನರೇ, ಯೇಸು ಕ್ರಿಸ್ತನು ನಿಮ್ಮ ಸಲವಾಗಿ ಸತ್ತು, ಮೂರನೆ ದಿವಸದಲ್ಲಿ ಎದ್ದು, ಪರಲೋಕಕ್ಕೇರಿ ಹೋಗಿದ್ದಾನೆ. ಅಲ್ಲಿ ಆತನು ದೇವರ ಬಲಪಾರ್ಶ್ವದಲ್ಲಿ ಕೂತು ಪಾಪಿಷ್ಠರಿಗಾಗಿ ಮಧ್ಯಸ್ತಿಕೆ ಮಾಡಿ, ಅವರನ್ನು ತನ್ನ ಮೋಕ್ಷರಾಜ್ಯಕ್ಕೆ ಕರಿಯುತ್ತಾನೆ. ಹ್ಯಾಗೆಂದ ರೆ "ಕಷ್ಟ ಪಟ್ಟು ಭಾರ ಹೊರುವವರೆಲ್ಲರೇ, ನನ್ನ ಬಳಿಗೆ ಬನ್ನಿರಿ; ನಾನು ನಿಮಗೆ ವಿಶ್ರಾಂತಿ ಕೊಡುತ್ತೇನೆ" ಎಂದು ಹೇಳುತ್ತಾನೆ. ಯೇಸುವಿನ ಮಧ್ಯಸ್ತಿಕೇ ಮೂಲಕವಾಗಿ ಹೊರ್ತು, ದೇವರು ನ ಮ್ಮನ್ನು ಪಾಪದಿಂದ ವಿಮೋಚಿಸನು. ಆದದರಿಂದ ಜನರೇ, ಮೂ ರ್ಖತನವನ್ನು ಬಿಟ್ಟು ಯೇಸುವಿನಲ್ಲಿ ವಿಶ್ವಾಸವಿಟ್ಟು, ಆತನ ಮೂ ಲಕವಾಗಿ ದೇವರುಂಟು ಮಾಡಿದ ರಕ್ಷಣೆಯನ್ನು ಅಂಗೀಕರಿಸಿ ರಿ; ಹೀಗೆ ಮಾಡಿದರೆ, ನೀವು ಭಾಗ್ಯವಂತರಾಗುವಿರಿ.

"ಯೇಸು ಕ್ರಿಸ್ತನಿಂದಾದ ವಿಮೋಚನೆಯ ಮುಖಾಂತರ, ಅವನ ಕೃಪೆಯಿಂದ ಉಚಿತವಾಗಿ ನೀತಿನಿರ್ಣಯ ಪಡುತ್ತಾರೆ." (ರೋಮ. ೩, ೨೬.)

---

## ೧೩. ಉಪಮೆ.

## ಏನೂ ಭಯವಿಲ್ಲ.

ಒಬ್ಬ ಸುಲಿಗೆಗಾರನು ಬಹು ಕಾಲದಿಂದ ಮಾರ್ಗಸ್ಥರನ್ನು ಹತ ಮಾಡಿ, ಅವರ ಹಣ ಇತ್ಯಾದಿ ಸಾಮಾನುಗಳನ್ನು ಸುಲ ಕೊಂಡು, ತನ್ನ ಗುಹೆಯಲ್ಲಿ ಕೂಡಿಸಿ, ಈ ಪ್ರಕಾರ ಜೀವನ ಮಾಡಿ ಕೊಂಡಿದ್ದನು. ಒಂದಾನೊಂದು ದಿವಸ ಅವನು ಸರಕಾರದವರ ಕೈಯಲ್ಲಿ ಶಿಕ್ಕಿ ಬಿದ್ದನು. ಆಗ್ಯೆ ಸರಕಾರದವರು ಅವನು ದೊಡ್ಡ ನರಹತ್ಯಗಾರನೆಂದು ಕಂಡು, ಅವನನ್ನು ನಾಲ್ಕು ದಿವಸ ವಿಚಾರಣೆ ಮಾಡಿದನಂತರ ಪಾಶಿಗೆ ಕೊಡುವ ಶಿಕ್ಷೆ ನೇಮಿಸಿದರು. ಹೀಗಿರುವಾಗ್ಯೆ ಅವನು ಆ ನಾಲ್ಕು ದಿವಸಗಳ ವರೆಗೆ ತನ್ನ ಮರಣದ ವಿಷಯದಲ್ಲಿ ಏನೂ ದುಃಖದ ಕುರುಹು ತೋರಿಸದೆ, ಕುಡಿಯುತ್ತಾ ಉಣ್ಣುತ್ತಾ ಪದಗಳನ್ನು ಹಾಡುತ್ತಾ ಸಂತೋಷದಲ್ಲಿದ್ದನು. ಅವನಿಗೆ ಪಾಶಿ

ಗೆ ಕೊಡುವ ಮುಂಚಿನ ದಿವಸದ ರಾತ್ರೆಯಲ್ಲಿ, ಶೆರೆಮನೆಯ ಅಧಿಕಾರಿಯು, ಅವನು ಏನು ಮಾಡುವನೆಂದು ನೋಡುವ ಹಾಗೆ, ಶೆರೆಮನೆಯ ಬಾಗಿಲನ್ನು ತೆರದು ನೋಡುತ್ತಾ ಇದ್ದನು. ಆಗ್ಯೆ ಮರು ದಿವಸ ತನಗೆ ಪಾಶಿ ಕೊಡುತ್ತಾರೆಂದು ಅವನಿಗೆ ತಿಳಿದಿದ್ದರೂ, ಅವನು ಏನೂ ಭಯ ಪಡದೆ, ಮುಂಚಿನಂತೆಯೇ ಉಂಡು, ಕುಡಿದು, ಹಾಡುತ್ತಾ ನಿರ್ಭಯದಲ್ಲಿದ್ದನು ಹೊರ್ತು, ತಪ್ಪಿಸಿ ಕೊಂಡು ಓಡಿ ಹೋಗುವ ಮನಸ್ಸು ಅವನಿಗಿರಲಿಲ್ಲ. ಇದನ್ನು ಕಂಡು, ಕಾವಲಿಗಾರರು ಅವನ ಹುಚ್ಚುತನಕ್ಕಾಗಿ ಆಶ್ಚರ್ಯ ಪಟ್ಟು, ಅವನಿಗೆ ನಾಳೆ ನಿನಗೆ ಪಾಶಿ ಕೊಡುತ್ತಾರೆಂಬುವದು ನಿನಗೆ ತಿಳಿಯುವದೋ? ಎಂದು ಕೇಳಿದರು. ಅದಕ್ಕವನು—ನನಗೆ ತಿಳಿದದೆ, ಆದರೆ ಸರಕಾರದವರು ದಯವುಳ್ಳವರು, ನನ್ನನ್ನು ಏಕಾಏಕಿ ಪಾಶಿ ಕೊಡದೆ, ಈ ನಾಲ್ಕು ದಿವಸಗಳ ಪರಿಯಂತರ ನಾನು ಉಂಡು ಕುಡಿದು ಸೌಖ್ಯ ಪಡುವ ಹಾಗೆ, ಸಮಯ ಕೊಟ್ಟದರಿಂದ ಸರಕಾರದವರು ಬಹು ಕರುಣವಂತರೆಂದು ನಾನು ಬಲ್ಲೆನು; ಮತ್ತು ಈ ಶೆರೆಮನೆಯ ಅಧಿಕಾರಿಯು, ನಾನು ತಪ್ಪಿಸಿ ಕೊಂಡು ಹೋಗುವ ಹಾಗೆ, ನನಗೆ ಉಪಾಯ ತೋರಿಸಿದ್ದರಿಂದ ನನಗೇನೂ ಭಯವಿಲ್ಲ; ನಾನು ಉಂಡು ಕುಡಿ

ದು ಗಾಯನ ಮಾಡುವದು ಬಿಡಲಾರೆನು, ಅಂದನು. ಇಷ್ಟರೊಳಗೆ ಕೋಳಿ ಕೂಗಿತು, ಬೆಳಗಾಯಿತು. ಆಗ್ಯೆ ಅಮಲದಾರರೂ ಆಳುಗಳೂ ನ್ಯಾಯಾಧಿಪರೂ ಬಂದು, ಅವನನ್ನು ಶೆರೆಮನೆಯಿಂದ ಹೊರಗೆ ತಂದು, ಹಿಂಗ್ಯೆ ಕಟ್ಟಿ, ಕಣ್ಣುಗಳ ಮೇಲೆ ವಸ್ತ್ರ ಮುಚ್ಚಿ, ಅವನಿಗೆ ಪಾಶಿ ಕೊಟ್ಟರು. ಪಾಶಿಗೆ ಅವನನ್ನು ಒಯ್ಯುವಾಗ್ಯೆ ಅವನು—ಹಾಹಾ, ನಾನು ಎಂಥಾ ಮೂರ್ಖನು! ನನಗೆ ತಪ್ಪಿಸಿ ಕೊಳ್ಳುವ ಉಪಾಯ ದೊರಕಿದರೂ, ನಾನು ಕುಡಿಯುವದರಲ್ಲಿಯೂ ಉಣ್ಣುವದರಲ್ಲಿಯೂ ಹಾಡುವದರಲ್ಲಿಯೂ ಸಂತೋಷ ಪಟ್ಟೆನು; ನನ್ನ ಸಂತೋಷ ಸುಡಲಿ, ನಾನು ಈಗ ಸಾಯುತ್ತೇನೆ, ನನ್ನ ಸುಖದಿಂದ ಏನು ಪ್ರಯೋಜನ? ಅಯ್ಯೋ ನಾನು ಮೂರ್ಖನೇ ಸರಿ, ಅಂದನು.

## ತಾತ್ಪರ್ಯವು.

ಹೀಗೆ ಪಾಪದಲ್ಲಿ ಮಗ್ನರಾದವರು ಹುಚ್ಚರೇ ಸರಿ. ಇದನ್ನು ಓದುವವನೇ, ಪಾಪದ ದೆಸೆಯಿಂದ ನಿನ್ನ ಮೇಲೆ ದೇವರ ಕೋಪ ವ್ಯಾಪಿಸುತ್ತದೆ; ಮತ್ತು ನರಕದ ಶಿಕ್ಷೆಯು ನಿನ್ನ ಮೇಲೆ ತೂಗಾಡುತ್ತದೆ. ನಿನ್ನ ಜೀವವು ನೀರಿನ ಮೇಲಿನ ಗುಳ್ಳೆಯ ಹಾಗೆ ಕ್ಷಣಭಂಗುರವಾದದ್ದು. ನಿನ್ನ ಕಪಟ, ಮೋಸ, ಸುಳ್ಳು, ಮೂ

ಕರ್ಿಪೂಜೆ, ವ್ಯಭಿಚಾರ ಇತ್ಯಾದಿ ಅಸಹ್ಯವಾದ ದುಷ್ಟ ಪಾಪದ ದೆಸೆಯಿಂದ ಮರಣದ ತರುವಾಯ ನಿನಗೆ ನರಕವೇದನೆಯು ಪ್ರಾಪ್ತಿಯಾಗುವದು. ಇಂಥಾ ಮಹಾ ದೊಡ್ಡ ಸಂಕಟವು ಬರುವದೆಂದು ನಿನಗೆ ಸೂಚನೆ ಇದ್ದರೂ, ನೀನು ಭಯ ಪಡದೆ ಆಟಪಾಟಗಳಲ್ಲಿಯೂ ಉಂಡು ಕುಡಿಯುವದರಲ್ಲಿಯೂ ಕಾಲ ಕಳದು, ಇದೇ ಸುಖವಿದ್ದರೆ ಸಾಕು ಎಂದು ನೆನಸುತ್ತೀ. ಆದರೆ ದೇವರು ದೊಡ್ಡ ಶಿಕ್ಷೆ ಕೊಡುವ ಮುಂಚೆಯೇ ನಡುಗಿ ಪಾಪಕ್ಕಾಗಿ ದುಃಖಪಟ್ಟು, ಅದರಿಂದ ತೊಲಗಿ ಹೋಗುವ ಪ್ರಯತ್ನ ಮಾಡು; ಯಾಕಂದರೆ, ಕರುಣಾವುಳ್ಳ ದೇವರು, ನೀನು ನಾಶವಾಗಿ ಹೋಗಬಾರದೆಂದು, ನಿನ್ನ ಅಂಧಕಾರವಾದ ಅಜ್ಞಾನಾಂಕಣದ ಬಾಗಲನ್ನು ತೆರದಿಟ್ಟು, ನೀನು ಪಾಪದ ಸಂಕೋಲೆಯಿಂದ ಬಿಡುಗಡೆಯಾಗುವ ಹಾಗೆ ಲೋಕರಕ್ಷಕನಾದ ಯೇಸು ಕ್ರಿಸ್ತನನ್ನು ಕಳುಹಿಸಿದ್ದಾನೆ. ಮತ್ತು ಆ ರಕ್ಷಕನು ನಿನ್ನ ಪಾಪವನ್ನು ತನ್ನ ತಲೆಯ ಮೇಲೆ ಶೆಕ್ಕೊಂಡು ನಿನಗೆ ಬರುವ ನಿತ್ಯ ಮರಣವನ್ನು ತಾನೇ ಪಡಕೊಂಡನು. ಆದದರಿಂದ ಇಂಥಾ ರಕ್ಷಣೆಯನ್ನು ವ್ಯರ್ಥವಾಗಿ ಕಳಕೊಳ್ಳಬೇಡ. ಅಮೂಲ್ಯವಾದ ನಿನ್ನ ಆತ್ಮರಕ್ಷಣೆಯನ್ನು ನೀನು ಇಹದಲ್ಲಿ ಕಳ ಕೊಂಡರೆ, ಪರದಲ್ಲಿ ನಿನಗೆ ಶಿಕ್ಕದು; ಮತ್ತು ದೇವರ ರಾಜ್ಯದಲ್ಲಿ ನೀನು ಶೇರ ಕೂಡದು; ಆಗ್ಯೆ ನೀನು ದುಃಖ ಪಡ ಬೇಕಾಗುವದು. ಈಗ ಯೇಸು ಕ್ರಿಸ್ತನು ದೇವರ ಕೃಪೆಯ

ಬಾಗಲು ತೆರದಿದ್ದಾನೆ; ಆದಾಗ್ಯೂ ಪಾಪದ ಬಂಧನೆಯಲ್ಲಿರುವವರು ಹೊರ ಹೊರಡಲಿಕ್ಕೆ ಮನಸ್ಸಿಲ್ಲದವರಾಗಿದ್ದಾರೆ. ಅವರು ತಮ್ಮ ಮನಸ್ಸಿನಲ್ಲಿ "ದೇವರು ತಮ್ಮನ್ನು ಜೀವದಿಂದ ಬದುಕಿಸುತ್ತಾನೆ, ಕಾಪಾಡುತ್ತಾನೆ, ನಾನಾ ಪ್ರಕಾರದ ಸುಖವನ್ನು ಕೊಡುತ್ತಾನೆ: ಆದದರಿಂದ ಆತನು ತಮ್ಮ ಮೇಲೆ ರೋಷವುಳ್ಳವನಾಗಿ ಕಾಣುವದಿಲ್ಲ; ಆತನು ತಮ್ಮ ಮೇಲೆ ಉಗ್ರನಾಗಿದ್ದರೆ, ತಮ್ಮನ್ನು ಇಷ್ಟು ಕಾಲ ಕಾಪಾಡದೆ, ಮೊದಲೇ ಕ್ಷಣದಲ್ಲಿ ತಮ್ಮನ್ನು ನಾಶ ಮಾಡುತ್ತಿದ್ದನು" ಎಂದು ನೆನಸುತ್ತಾರೆ. ಈ ಪ್ರಕಾರ ಜನರು ದೇವರ ವಿಷಯದಲ್ಲಿ ನಾನಾ ಆಲೋಚನೆಗಳನ್ನು ಮಾಡಿ, ಇನ್ನು ಪಾಪದಲ್ಲಿಯೇ ಪ್ರವರ್ತಿಸುತ್ತಾರೆ. ಓ ಪ್ರಿಯ ಜನರೇ, ಇದು ಎಂಥಾ ಭಯಂಕರವಾದ ಸ್ಥಿತಿಯು! ಪಾಪದ ಶೆರೆಯಲ್ಲಿರುವವರೇ, ನಿಮ್ಮನ್ನು ಬಿಡುಗಡೆ ಮಾಡಲಿಕ್ಕೆ ಬಂದ ರಕ್ಷಕನಾದ ಯೇಸು ಕ್ರಿಸ್ತನು ತೆರದ ಬಾಗಲಿನೊಳಗೆ ಶೇರುವದಕ್ಕಾಗಿ ಪಾಪದ ಬಂಧನೆಯಿಂದ ಓಡಿ ಹೋಗಿರಿ.

"ದೇವರ ದಯವು ಮಾನಸಾಂತರಕ್ಕೆ ನಿನ್ನನ್ನು ಪ್ರೇರಣೆ ಮಾಡುತ್ತದೆಂದು ತಿಳಿಯದೆ, ಅವನ ದಯೆ, ತಾಳ್ಮೆ, ದೀರ್ಘಶಾಂತಿಗಳ ಐಶ್ವರ್ಯವನ್ನು ಅಸಡ್ಡೆ ಮಾಡುತ್ತೀಯಾ?" (ರೋಮ. ೨, ೪.)

---

## ೧೪. ಉಪಮೆ.

## ಪಶ್ಚಾತ್ತಾಪವು.

ಒಬ್ಬ ಕಳ್ಳನಿಗೆ ಸರಕಾರದವರು ಹಿಡಿದಾಗ, ಅವನು ತನ್ನ ಕಳ್ಳತನದ ಕೃತ್ಯವನ್ನು ಒಪ್ಪಿ ಕೊಂಡು, ತಾನು ಕದ್ದು ಕೊಂಡದ್ದು ಖರೆ ಎಂದು ಅರಿಕೆ ಮಾಡಿದನು; ಮತ್ತು ಇನ್ನು ಮುಂದೆ ತಾನು ಅಂಥಾ ಕೆಟ್ಟ ಕೃತ್ಯವನ್ನು ಮಾಡಲಾರೆ; ಆ ಕೃತ್ಯವನ್ನು ಅಸಹ್ಯ ಪಟ್ಟು ಬಿಟ್ಟು ಬಿಡುತ್ತೇನೆ; ಆದದರಿಂದ ತನ್ನ ಅಪರಾಧವನ್ನು ಮನ್ನಿಸ ಬೇಕೆಂದು ಬೇಡಿ ಕೊಂಡನು. ಆಗ್ಯೆ ನ್ಯಾಯಾಧಿಪತಿಯು ಅವನಿಗೆ—ನೀನು ಕಳ್ಳತನ ಮಾಡಿದ್ದಕ್ಕೆ ಈಗ ದುಃಖ ಪಟ್ಟು ಇನ್ನು ಮುಂದೆ ಅಂಥಾ ಕೃತ್ಯ ಮಾಡುವದಿಲ್ಲವೆಂದು ಹೇಳುತ್ತೀ, ಖರೆ; ಆದರೆ ಇನ್ನು ಮುಂದೆ ನೀನು ಏನು ಮಾಡುವಿ? ಎಂದು ನಾವು ವಿಚಾರಿಸುವದಿಲ್ಲ; ನೀನು ನ್ಯಾಯಕ್ಕೆ ವಿರೋಧವಾಗಿ ನಡಿಸಿದ ಕಳ್ಳತನವು ಸ್ಥಾಪನೆ ಆಯಿತು. ನೀನು ದುಃಖ ಪಡುತ್ತೀ ಎಂದು ನಿನ್ನನ್ನು ಬಿಟ್ಟು ಬಿಟ್ಟರೆ, ದೇಶದಲ್ಲೆಲ್ಲಾ ಕಳ್ಳತನವು ಹೆಚ್ಚಾಗಿ, ದೊಡ್ಡ ಕೇಡು ಉಂಟಾಗುವದು ಎಂದು, ಮಣ್ಣು ಕೆಲಸ ಮೊದಲಾದ ಕಾಮಗಾರಿ ಮಾಡುವಂತೆ, ಆ ಕಳ್ಳನಿಗೆ ಎರಡು ವರುಷದ ಶೆರೆ ನೇಮಿಸಿದನು.

## ತಾತ್ಪರ್ಯವು.

ಈ ಪ್ರಕಾರ ಬಹು ಜನರು ತಾವು ಪಾಪಿಷ್ಠರಾಗಿದ್ಧೇವೆಂದು ಅರಿಕೆ ಮಾಡುತ್ತಾರೆ; ಮತ್ತು ತಾವು ಮಾಡಿದ ಪಾಪಕ್ಕಾಗಿ ದುಃಖ ತೋರಿಸಿದರೆ, ದೇವರು ಕ್ಷಮಿಸುವನೆಂದು ಹೇಳುತ್ತಾರೆ. ಹೀಗೆ ಹೇಳುವವರು ಭ್ರಾಂತರೇ ಸರಿ; ಅವರು ವ್ಯರ್ಥವಾದ ನೆವನ ಹೇಳುತ್ತಾರೆ. ಕೇಳಿರಿ! ಇಂಥವರು ತಾವು ಮಾಡಿದ ಕೆಟ್ಟ ಕೆಲಸಕ್ಕಾಗಿ ನಿಜವಾಗಿ ದುಃಖ ಪಡುವವರಲ್ಲ. ನಿಜವಾಗಿ ಪಾಪಕ್ಕೆ ದುಃಖ ಪಡುವವರು ಪಾಪವನ್ನು ಬಿಡುವರು; ಆದರೆ ಅವರು ಬಿಡುವದೇ ಇಲ್ಲ. ಪಾಪ ಮಾಡಿ ದುಃಖ ಪಟ್ಟರೂ ದೋಷ ಹೋಗಲಾರದು; ಯಾಕಂದರೆ, ಸರ್ವ ಲೋಕದ ನ್ಯಾಯಾಧಿಪತಿಯಾದ ಪರಿಶುದ್ಧ ದೇವರು, ಜನರು ದುಃಖ ಪಡುವದರಿಂದ ಮಾತ್ರ ಅವರಿಗೆ ಕ್ಷಮಿಸುವದಿಲ್ಲ. ಹಾಗೆ ಕ್ಷಮಿಸಿದರೆ, ಆತನ ನ್ಯಾಯಪ್ರಮಾಣದ ನಿಬಂಧನೆಯು ವ್ಯರ್ಥವಾಗುವದು. ಹೀಗಿರುವದರಿಂದ ಪ್ರಿಯ ಜನರೇ, ನಿಮ್ಮ ಪಾಪವನ್ನು ಬಿಟ್ಟು, ಪಶ್ಚಾತ್ತಾಪ ಪಟ್ಟು, ಯೇಸುವಿನ ಬಳಿಗೆ ಬನ್ನಿರಿ; ಆತನೇ ತನ್ನ ರಕ್ತದ ಮೂಲವಾಗಿ ನಿಮುಗೋಸ್ಕರ ಪ್ರಾಯಶ್ಚಿತ್ತ ಮಾಡಿದ್ಧಾನೆ. ಆದದರಿಂದ ಆತನಲ್ಲಿ ವಿಶ್ವಾಸವಿಡುವವನು ಮಾತ್ರ ದೇವರ ಕೃಪೆಯನ್ನು ಹೊಂದಿ, ಪಾಪಕ್ಕೆ ಹೇಸಿ, ಆತನ ಮಾರ್ಗದಲ್ಲಿ ನಡೆದು, ಪಾಪ ಪರಿಹಾರ ಹೊಂದುತ್ತಾನೆ. ಇಂಥವನೇ ನಿಜ ಪಶ್ಚಾತ್ತಾಪ ಪಡುವವನಾಗಿದ್ಧಾನೆ.

"ರಕ್ಷಿಸಲ್ಪಡ ಬೇಕೆಂದು, ಆಕಾಶದ ಕೆಳಗೆ (ಯೇಸು ಕ್ರಿಸ್ತನ ಹೊರತು) ಬೇರೆ ಹೆಸರು ಇಲ್ಲವೇ ಇಲ್ಲ." (ಅಪೊ. ಕ್ರಿ. ೪, ೧೨.)

---

## ೧೫. ಉಪಮೆ.

## ನಾಮಸ್ಮರಣೆಯು.

ಒಂದು ಊರಿನಲ್ಲಿ ಒಬ್ಬ ದಯವುಳ್ಳ ವೈದ್ಯನಿದ್ದನು. ಅವನು ಜನರ ಮೇಲೆ ಬಹು ಪ್ರೀತಿ ಇಟ್ಟು, ಅವರಿಗೆ ಕರದು ಹೇಳಿದ್ದು—ಜನರೇ, ನಿಮಗೆ ಎಂಥಾ ರೋಗವಿದ್ದರೂ ಚಿಂತೆ ಇಲ್ಲ, ನನ್ನ ಬಳಿಗೆ ಬನ್ನಿರಿ; ನಾನು ನಿಮ್ಮ ರೋಗವೆಲ್ಲಾ ಪರಿಹಾರ ಮಾಡುತ್ತೇನೆ ಅಂದಿದ್ದನು. ಆಗ್ಯೆ ಬಹು ಕಾಲ ಛಳಿ ಜ್ವರದಿಂದ ಶ್ರಮೆ ಪಡುವ ಒಬ್ಬ ಒಕ್ಕಲಿಗನು ತನ್ನ ಮನಸ್ಸಿನಲ್ಲಿ, ಈ ದಯವುಳ್ಳ ವೈದ್ಯನ ಬಳಿಗೆ ಹೋದರೆ ತನ್ನನ್ನು ಪೂರ್ಣ ಸ್ವಸ್ಥ ಮಾಡುವನು ಎಂದು ಯೋಚಿಸಿ, ಅವನ ಬಳಿಗೆ ಬಂದನು. ಅವನು ವೈದ್ಯನ ಬಳಿಗೆ ಬರುವಾಗ್ಯೆ ನಾಲ್ಕು ಮಂದಿಯನ್ನು ಕರಕೊಂಡು, ತಾಳ ಮೃದಂಗ ಇತ್ಯಾದಿಗಳಿಂದ ವಾದ್ಯ ಮಾಡಿಸಿ ಕೊಂಡು, ವೈದ್ಯನ ಮನೆ ಬಾಗಲ ಹೊರಗೆ ನಿಂತು—ವೈದ್ಯನೇ, ವೈದ್ಯನೇ, ವೈದ್ಯನೇ ಎಂದು ಕೂ

ಗುತ್ತಾ ಇದ್ದನು. ಆ ಸಮಯದಲ್ಲಿ ಆ ವೈದ್ಯನ ಸೇವಕನು ಅವರಿಗೆ—ನೀವು ಒಳಗೆ ಬಂದು ನಿಮ್ಮ ಮನೋರಥವನ್ನು ನನ್ನ ಯಜಮಾನನಿಗೆ ತಿಳಿಸಿರಿ, ವ್ಯರ್ಥವಾಗಿ ಯಾಕೆ ಒದರುತ್ತೀರಿ? ಅಂದನು. ಅದಕ್ಕೆ ಆ ರೋಗಿಷ್ಠನಾದ ಒಕ್ಕಲಿಗನು ಉತ್ತರವಾಗಿ—ನನಗೆ ವ್ಯಾಧಿ ಹತ್ತಿದೆ; ಆದ ಕಾರಣ ಅದು ಪರಿಹಾರವಾಗುವ ಹಾಗೆ ವೈದ್ಯನ ನಾಮಸ್ಮರಣೆ ಮಾಡುತ್ತೇನೆ; ಆತನ ನಾಮಸ್ಮರಣೆ ಮಾಡುವದರಿಂದ ನನ್ನ ರೋಗವು ಪರಿಹಾರವಾಗಿ ಹೋಗುವದು, ಅಂದನು. ಆಗ್ಯೆ ಸೇವಕನು—ಹಾಗಲ್ಲ, ವೈದ್ಯನಿಗೆ ನಿನ್ನ ರೋಗದ ಸಂಗತಿಯನ್ನು ತಿಳಿಸ ಬೇಕು ಹೊರತು, ವ್ಯರ್ಥವಾಗಿ ಬಡಬಡವೆಂದು ಒದರಿದರಿಂದ ಉಪಯೋಗವಿಲ್ಲ, ಅಂದನು. ಆದಾಗ್ಯೂ ಆ ಜನರು ಅವನ ಮಾತು ಕೇಳದೆ ವಾದ್ಯದಿಂದ ಬಹು ಗುಲ್ಲು ಮಾಡಿ ಕೊಂಡು ಹೋದರು. ಆಗ್ಯೆ ಪ್ರೀತಿಯುಳ್ಳ ಆ ವೈದ್ಯನು ಹೊರಗೆ ಬಂದು, ಅವರಿಗೆ—ಪ್ರಿಯ ಮಿತ್ರರೇ, ನಿಮಗೇನಾದರೂ ಬೇಕಾದರೆ, ಬೇಡಿ ಕೊಳ್ಳಿರಿ; ಆಗ ನಿಮಗೆ ಶಿಕ್ಕುವದು; ಮತ್ತು ನನ್ನ ಮೇಲೆ ಭರವಸವನ್ನಿಡಿರಿ, ನಾನು ನಿಮಗೆ ಸಹಾಯ ಮಾಡ ಸಿದ್ಧವಾಗಿದ್ದೇನೆಂದನು. ಈ ಪ್ರೀತಿಯ ಮಾತು ಅವರ ಮನಸ್ಸಿಗೆ ಶೇರದೆ, ಅವರು ಮುಂಚಿ

ಗಿಂತ ಅಧಿಕವಾಗಿ—ವೈದ್ಯನೇ, ವೈದ್ಯನೇ, ವೈದ್ಯನೇ! ಎಂದು ಕೂಗಲಾರಂಭಿಸಿದರು; ಆದ ಕಾರಣ ಆ ದಯಾಸಾಗರನಾದ ವೈದ್ಯನು ಅವರ ಒದರೋಣಕ್ಕೆ ಅಸಹ್ಯ ಪಟ್ಟು, ಅವರನ್ನು ಅಲ್ಲಿಂದ ಓಡಿಸಿದನು.

## ತಾತ್ಪರ್ಯವು.

ಇದೇ ಪ್ರಕಾರ ದಯಾಸಾಗರನಾದ ದೇವರು ಜನರಿಗೆ—ನನಗೆ ವಿಜ್ಞಾಪನೆ ಮಾಡಿರಿ, ನನಗೆ ನಿಮ್ಮ ಇಷ್ಟಗಳನ್ನು ತಿಳಿಸಿರಿ ಎಂತ ಆಜ್ಞೆಗಳನ್ನು ಕೊಟ್ಟಿದ್ದಾನೆ. ಆದಾಗ್ಯೂ ಜನರು ಹೀಗೆ ನಡಿಯದೆ, ನಿಜ ಭಕ್ತಿಯನ್ನು ಬಿಟ್ಟು, ಸುಮ್ಮನೆ ಭಜನೆ ಮಾಡುತ್ತೇವೆಂದು, ಬೇರೆ ಬೇರೆ ದೇವರುಗಳ ಹೆಸರನ್ನು ಉಚ್ಚರಿಸಿ, ಸ್ಮರಣೆ ಮಾಡುತ್ತಾರೆ. ಹ್ಯಾಗಂದರೆ: ಕೆಲವರು, ಶಿವ, ಶಿವ, ಶಿವ! ಎಂದೂ ಕೆಲವರು, ಜಯರಾಮ, ಜಯರಾಮ, ಜಯರಾಮ! ಎಂದೂ ಮತ್ತೂ ಕೆಲವರು, ರಾಮಕೃಷ್ಣ ರಾಮಕೃಷ್ಣ! ಎಂದೂ ಇನ್ನು ಕೆಲವರು, ಗೋವಿಂದ, ಗೋವಿಂದ! ಎಂದೂ, ಈ ಪ್ರಕಾರ ತಮಗೆ ಆಪತ್ತು ಬಂದಾಗ್ಯೆ ಬಡಬಡವೆಂದು ಒದರುತ್ತಾರೆ. ಇಂಥಾ ಸ್ಮರಣೆಯು ದೇವರಿಗೆ ಒಪ್ಪ ತಕ್ಕದ್ದಲ್ಲ. ಆತನು ಪೂರ್ಣ ಭಕ್ತಿಯಿಂದಲೂ ವಿಶ್ವಾಸದಿಂದಲೂ ಹೊರಡುವ ಪ್ರಾರ್ಥನೆ ಕೇಳುವ ಕರ್ತನಾಗಿದ್ದಾನೆ. ಆದದರಿಂದ ಜನರೇ, ನಿಮಗೆ ಬೇಕಾದದ್ದೆ

ಲ್ಲಾ ತಂದೆಯಾದ ದೇವರಿಗೆ ಪ್ರಾರ್ಥನೆಯಿಂದ ಬೇಡಿ ಕೊಳ್ಳಿರಿ. ಬೇಡಿ ಕೊಳ್ಳುವವನಿಗೆ ಶಿಕ್ಕುವದು.

"ನೀವು ಪ್ರಾರ್ಥನೆ ಮಾಡುವಾಗ ವ್ಯರ್ಥ ಮಾತುಗಳನ್ನು ಆಡ ಬೇಡಿರಿ." (ಮತ್ತಾಯ. ೬, ೭.)

---

## ೧೬. ಉಪಮೆ.

## ಪಂಢರಿಪುರದ ಯಾತ್ರೆ.

ಒಬ್ಬ ಕೆಡಕನಿದ್ದನು; ಅವನ ಕೆಟ್ಟ ನಡತೆ ಸರ್ವರಿಗೆ ತಿಳಿದಿತ್ತು; ಆದದರಿಂದ ಅವನನ್ನು ನಿರ್ಮೂಲ ಮಾಡುವದಕ್ಕೆ ಸಮಯ ಹುಡುಕುತ್ತಿದ್ದರು. ಹೀಗಿರುವಾಗ್ಯೆ ಅವನು ಪಂಢರಿಪುರಕ್ಕೆ ಯಾತ್ರೆ ಮಾಡುವದಕ್ಕೋಸ್ಕರ ಹೊರಟು ಹೋಗಿ, ಚಂದ್ರಭಾಗ ನದಿಯಲ್ಲಿ ಸ್ನಾನ ಮಾಡಿ, ಸಂಕಲ್ಪ ಅರ್ಪಿಸಿ, ಬ್ರಾಹ್ಮಣರಿಗೆ ದಕ್ಷಿಣೆ ಇತ್ಯಾದಿಗಳನ್ನು ಕೊಟ್ಟು, ವಿಠೋಬನ ದರ್ಶನ ಮಾಡಿ ಕೊಂಡು, ತುಳಸೀ ಮಾಲೆ ಧರಿಸಿ ಕೊಂಡು, ಪುನಹ ತನ್ನ ಊರಿಗೆ ಬಂದನು. ಆ ಸಮಯದಲ್ಲಿ ಒಬ್ಬ ವರ್ತಕನು ಅವನನ್ನು ನೋಡಿ—ಅವನು ದೊಡ್ಡ ಭಕ್ತನೂ, ಅವನು ಪಂಢರಿಪುರದ ಯಾತ್ರೆ ಮಾಡಿ ಕೊಂ

ಡು, ತನ್ನ ಪಾಪಗಳನ್ನೆಲ್ಲಾ ಭಸ್ಮ ಮಾಡಿ ಕೊಂಡು ಬಂದಿದ್ದಾನೆ; ಆತನ ಪೂರ್ವದ ಕೆಟ್ಟ ನಡತೆಯನ್ನು ಲಕ್ಷಕ್ಕೆ ತರತಕ್ಕದಲ್ಲವೆಂಬದಾಗಿ ಮಾತಾಡಿದನು. ಇದನ್ನು ಆ ಕೆಡಕನು ತಿಳಕೊಂಡು, ಇನ್ನು ಮೇಲೆ ಜನರು ತನ್ನ ಮೇಲೆ ಭರವಸವಿಡುವ ಹಾಗೆ ನಡ ಕೊಳ್ಳ ಬೇಕೆಂದು, ತಾನು ಸಾಧು ಗುಣವುಳ್ಳವನಂತೆ, ಬಹು ವಿನಯದಿಂದ ಆ ವರ್ತಕನ ಬಳಿಗೆ ಬಂದು, ಹೇಳಿದ್ದು—ನಾನು ಪಾಪಪರಿಹಾರ ಹೊಂದಿ ಪುಣ್ಯವಂತನಾಗ ಬೇಕೆಂದು, ಪಂಢರಿಪುರಕ್ಕೆ ಹೋಗಿ, ನನ್ನ ವಿಶಿಷ್ಟ ಹಣ ಖರ್ಚು ಮಾಡಿ, ಏನೂ ಹಣವಿಲ್ಲದವನಾಗಿ ತಿರುಗಿ ಬಂದಿದ್ದೇನೆ; ಈಗ ನನಗೆ ವಾಸ ಮಾಡಲಿಕ್ಕೆ ಸ್ಥಳವಿಲ್ಲ; ಮತ್ತು ಜನರು ನನಗೆ ಆಶ್ರಯ ಕೊಡುವದಿಲ್ಲ; ತಾವು ದಯ ಮಾಡಿ ತಮ್ಮ ಮನೆಯಲ್ಲಿ ಬಿಡಾರ ಮಾಡುವ ಹಾಗೆ ಸ್ವಲ್ಪ ಸ್ಥಳ ಕೊಟ್ಟರೆ, ಬಹಳ ಉಪಕಾರವಾದೀತು ಎಂದು ಬೇಡಿ ಕೊಂಡನು. ಆಗಲಾ ವರ್ತಕನು, ಈ ಸಾಧು ಮನುಷ್ಯನಿಗೆ ತನ್ನ ಮನೆಯಲ್ಲಿ ಸ್ಥಳ ಕೊಟ್ಟರೆ, ತನಗೆ ಉದ್ಧಾರವಾಗುವದೆಂದು ನೆನಸಿ, ತನ್ನ ಮನೆಯಲ್ಲಿ ಅವನಿಗೆ ಬಿಡಾರ ಕೊಟ್ಟನು. ತರುವಾಯ, ಠಕ್ಕು ಮಾಡಿದ ಆ ಸಾಧು ಮನುಷ್ಯನು ಸಮಯಾನುಕೂಲ ನೋಡಿ, ಆ ವರ್ತಕನ ಪೆಟ್ಟಿಗೆ

ಯಲ್ಲಿದ್ದ ಎರಡು ಸಾವಿರ ರೂಪಾಯಿಗಳನ್ನು ತಸ್ಕರಿಸಿ, ರಾತಾರಾತ್ರಿ ದೇಶಾಂತರವಾಗಿ ಹೋದನು.

## ತಾತ್ಪರ್ಯವು.

ಪಂಢರಿಪುರಕ್ಕಾದರೂ ಬೇರೆ ಯಾವ ಕ್ಷೇತ್ರಕ್ಕಾದರೂ ಹೋಗುವದರಿಂದಾಗಲಿ, ಅಥವಾ ಯಾವ ನದಿಯಲ್ಲಿ ಸ್ನಾನ ಮಾಡುವದರಿಂದಾಗಲಿ ಪಾಪವು ಹೋಗಲಾರದು ಮತ್ತು ಹೃದಯವು ಶುದ್ಧವಾಗದು. ಯಾತ್ರೆ ಮಾಡಲಿಕ್ಕೆ ಎಷ್ಟು ಖರ್ಚು ಶ್ರಮೆ ಉಂಟಾಗುತ್ತದೆ? ನೋಡಿರಿ! ಯಾತ್ರೆಯಿಂದ ಏನಾದರೂ ಒಳ್ಳೇದು ಉಂಟಾಗುವದಿಲ್ಲ; ಆದರೆ ದೇವರ ಆತ್ಮವನ್ನು ಯಾವನು ಹೊಂದುತ್ತಾನೋ ಆತನು ಯೇಸು ಕ್ರಿಸ್ತನ ಮೂಲವಾಗಿ ಹೊಸ ಜನ್ಮ ಹೊಂದಿ, ಪಾಪಗಳನ್ನು ಅಸಹ್ಯ ಮಾಡಿ, ಸನ್ಮಾರ್ಗವನ್ನು ಪ್ರೀತಿ ಮಾಡುತ್ತಾನೆ. ಯೇಸುವಿನ ಭಕ್ತನಾದವನು ಮಾತ್ರ ಹಳೆ ಮಾರ್ಗ ಬಿಟ್ಟು ಹೊಸ ಮಾರ್ಗದಲ್ಲಿಯೂ ಹೊಸ ಜೀವದಲ್ಲಿಯೂ ನಡದು ದೇವರ ಮಹಿಮೆಗಾಗಿ ಬದುಕುತ್ತಾನೆ ಹೊರತು, ಪಂಢರಿಪುರ ಇತ್ಯಾದಿ ಕ್ಷೇತ್ರಗಳಿಗೆ ಹೋಗಿ ಯಾತ್ರೆ ಮಾಡಿದವರು ಒಳ್ಳೆಯವರಾಗುವದಿಲ್ಲ. ಅನೇಕ ಕಳ್ಳರೂ ಮೋಸಗಾರರೂ ದುಷ್ಟ ಮನುಷ್ಯರು ಮೊದಲಾದವರು ನಾನಾ ಕ್ಷೇತ್ರಗಳಿಗೆ ಹೋಗಿ ಸ್ನಾನ ಮಾಡಿ ಬರುತ್ತಾರೆ; ಆದರೆ ಅವರ ದುರ್ಗುಣಗಳು ಅವರ

ನ್ನು ಅಂಟಿ ಕೊಂಡೇ ಬರುತ್ತವೆ, ಮತ್ತು ಅವರು ಮುಂಚಿನ ಸ್ಥಿತಿಯಲ್ಲೇ ಪ್ರವರ್ತಿಸುತ್ತಾರೆಂಬುವದು ಸರ್ವರಿಗೆ ತಿಳಿಯುತ್ತದೆ.

"ಓ ಕರ್ತನೇ, ನನ್ನ ಅಕ್ರಮದಿಂದ ನನ್ನನ್ನು ಪೂರ್ಣವಾಗಿ ತೊಳಿ; ನನ್ನ ಪಾಪದಿಂದ ನನ್ನನ್ನು ಶುಚಿ ಮಾಡು." (ಕೀರ್ತ. ೫೧, ೨)

---

## ೧೩. ಉಪಮೆ.

## ಭಿಕ್ಷಗಾರನು.

ಒಬ್ಬ ಭಿಕ್ಷಗಾರನು ಭಿಕ್ಷೆ ಬೇಡುತ್ತಾ ತಿರುಗಾಡಿ, ಬೇರೊಬ್ಬ ಭಿಕ್ಷಗಾರನ ಬಳಿಗೆ ಬಂದು, ಭಿಕ್ಷೆ ಕೊಡಿರಪ್ಪಾ ಎಂದು ಬೇಡಿದನು. ಆದರೆ ಆ ಭಿಕ್ಷಗಾರನು, ತಾನೇ ಭಿಕ್ಷೆಗೆ ಪಾತ್ರನಾಗಿದ್ದೇನೆ, ಹೀಗಿರುವಾಗ್ಯೆ ತನ್ನ ಬಳಿಯ ಭಿಕ್ಷೆ ಕೇಳುವ ಈ ಮನುಷ್ಯನು ಎಂಥಾ ಮೂಢನಾಗಿರ ಬೇಕೆಂದು ಸಿಟ್ಟು ಮಾಡಿದನು. ಆಗ ಒಬ್ಬ ಬುದ್ಧಿಯುಳ್ಳ ಮನುಷ್ಯನು ಬಂದು, ಆ ಬೇಡುವವನ ದುಃಖವನ್ನು ನೋಡಿ, ಅವನಿಗೆ—ನೀನು ಬಡ ಭಿಕ್ಷಗಾರನ ಬಳಿಗೆ ಬಂದು, ಭಿಕ್ಷೆ ನೀಡುವದಕ್ಕೆ ಬೇಡುವದೇನು? ನೀನು ಐಶ್ವರ್ಯವಂತರ ಬಳಿಗೆ ಹೋ

ಗಿ ಭಿಕ್ಷೆ ಬೇಡಿದರೆ, ನಿನಗೆ ಯಥೇಷ್ಟ ಶಿಕ್ಕುವದು; ಹೋಗು, ಅಂದನು.

## ತಾತ್ಪರ್ಯವು.

ಇದೇ ಪ್ರಕಾರ ಪಾಪಿಷ್ಟರು ತಮ್ಮಂತೆ ಪಾಪಿಷ್ಟರಾಗಿರುವವರ ಬಳಿಗೆ ಬಂದು ಪುಣ್ಯ ಬೇಡಿ ಕೊಳ್ಳುತ್ತಾರೆ. ಬ್ರಾಹ್ಮಣರು, ಬೇರೆ ಜಾತಿಯವರು, ಸನ್ಯಾಸಿಗಳು, ಬೈರಾಗಿಗಳು, ಫಕೀರರು ಮುಂತಾದವರು ಇತರ ಜನರ ಹಾಗೆಯೇ ಪಾಪಿಷ್ಟರಾಗಿದ್ದಾರೆ. ಆದದರಿಂದ ಅವರು ಸುಳ್ಳು ಹೇಳುತ್ತಾರೆ, ಕಪಟ ಮಾಡುತ್ತಾರೆ, ಮೋಸ ನಡಿಸುತ್ತಾರೆ; ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಎಂಬ ಷಡ್ವೈರಿಗಳಿಂದ ತುಂಬಿದವರಾಗಿದ್ದಾರೆ. ಈ ಪ್ರಕಾರ ಸರ್ವರು ಕೆಟ್ಟು ಹೋಗಿದ್ದಾರೆಂಬುವದಕ್ಕೆ ಸಂಶಯವಿಲ್ಲ. ಆದಾಗ್ಯೂ ಮೂರ್ಖರು ಬೈರಾಗಿಗಳನ್ನೂ ಸನ್ಯಾಸಿಗಳನ್ನೂ ಬ್ರಾಹ್ಮಣರನ್ನೂ ಗುರುಗಳಾಗಿ ಮಾಡಿ ಕೊಂಡು, ಅವರ ಮೂಲಕ ತಮ್ಮ ಪಾಪಪರಿಹಾರವನ್ನು ಹುಡುಕುತ್ತಾರೆ. ಇಂಥಾ ಪಾಪಿಷ್ಟರಾದ ಗುರುಗಳು ಮತ್ತೊಬ್ಬರ ಪಾಪ ಪರಿಹಾರ ಮಾಡುವದು ಹ್ಯಾಗೆ? ಅವರೆಲ್ಲರು ತಾವೇ ಪಾಪಿಗಳಾಗಿ, ಪುಣ್ಯ ಹುಡುಕುವ ಭಿಕ್ಷಗಾರರಾಗಿದ್ದಾರೆ; ಇಂಥವರ ಬಳಿಯಲ್ಲಿ ಪುಣ್ಯ ಎಂಬ ಭಿಕ್ಷೆ ಬೇಡುವದು ವ್ಯರ್ಥವಾಗಿದೆ.

ಆದದರಿಂದ ದೇವರು ಈ ಲೋಕದಲ್ಲಿ ನಿಜವಾದ ಗುರು ಇ

ಲ್ಲವೆಂದು ನೋಡಿ, ಪೂರ್ಣವಾಗಿ ಪಾಪರಹಿತನೂ ಸದ್ಗುಣಭರಿತನೂ ಆಗಿದ್ದ ಯೇಸು ಕ್ರಿಸ್ತನನ್ನು ಈ ದುಷ್ಟ ಲೋಕಕ್ಕೆ ಕಳುಹಿಸಿದ್ಧಾನೆ. ಪಾಪಿಷ್ಟರಾದ ನಮ್ಮ ರಕ್ಷಣೆಗೋಸ್ಕರ ಅವಶ್ಯವಾದದ್ದೂ ಯಾವದೋ ಅದೆಲ್ಲಾ ಯೇಸು ಕ್ರಿಸ್ತನು ಪರಿಪೂರ್ಣ ಮಾಡಿದನು. ಯಾವನಿಗೆ ಪಾಪ ಕ್ಷಮೆ, ಮನಃಶುದ್ಧೀಕರಣ, ಸಮಾಧಾನ, ದೇವರ ಪರಿಚೆತಿ, ದೇವರ ಸನ್ನಿಧಿಯಲ್ಲಿ ನಿತ್ಯ ವಾಸ ಬೇಕೋ, ಅವನು ಯೇಸು ಕ್ರಿಸ್ತನಿಗೆ ಶರಣ ಹೋಗಿ, ಆತನಲ್ಲಿ ವಿಶ್ವಾಸವಿಡ ಬೇಕು; ಏನಂದರೆ: ಆತನು, "ನನ್ನ ಬಳಿಗೆ ಬರುವವರನ್ನು ನಾನು ಎಂದಿಗೂ ತಳ್ಳಿ ಬಿಡಲಾರೆ" ಎಂದು ಹೇಳುತ್ತಾನೆ.

"ತಿಳಿದವನು ಇಲ್ಲ, ದೇವರನ್ನು ಹುಡುಕುವವನು ಇಲ್ಲ. ಎಲ್ಲರು ತಪ್ಪಿ ಹೋಗಿದ್ಧಾರೆ." (ರೋಮ. ೩, ೧೦.)

---

## ೧೮. ಉಪಮೆ.

## ತೊಳದ ಹಂದಿಯು.

ಒಬ್ಬ ದೊಡ್ಡ ಮನುಷ್ಯನು ಅನೇಕ ತರದ ಮೃಗಗಳನ್ನು ತನ್ನ ವಠಾರದಲ್ಲಿ ಸಾಕಿ, ಅವುಗಳ ಆಟಪಾಟ ನೋಡಿ ಹರುಷ ಪಡುತ್ತಿದ್ದನು. ಅವುಗಳಿರುವ ಸ್ಥಳದಲ್ಲಿ ಒಂದು ಹಂ

ದಿ ಇತ್ತು. ಅದು ಒಂದು ದಿವಸ ಕೆಸರಿನಲ್ಲಿ ಹೊರಳುವದ
ನ್ನು ಕಂಡು, ಅವನು ತನ್ನ ಸೇವಕರನ್ನು ಕರದು, ಅದನ್ನು
ಚನ್ನಾಗಿ ತೊಳದು ಶುದ್ಧ ಮಾಡಿ ತರ ಬೇಕೆಂದು ಅಪ್ಪಣೆ
ಕೊಟ್ಟನು ಆಗಲಾ ಸೇವಕರು ಅವನ ಅಪ್ಪಣೇ ಪ್ರಕಾರ
ಅದನ್ನು ಹಿಡಿದು, ಚನ್ನಾಗಿ ತೊಳೆದು ಶುದ್ಧ ಮಾಡಿ ತಮ್ಮ
ಯಜಮಾನನ ಬಳಿಗೆ ತಂದರು. ಆ ಮನುಷ್ಯನು ಅದನ್ನು
ನೋಡಿ, ಅದರ ಶುದ್ಧತ್ವಕ್ಕಾಗಿ ಸಂತೋಷ ಪಟ್ಟು, ತನ್ನ ವ
ಠಾರದಲ್ಲಿ ಅದನ್ನು ಪುನಹ ಇರಿಸಿ ಕೊಂಡನು. ಆದಾಗ್ಯೂ
ಆ ಹಂದಿಯು ಕೆಸರಿನಲ್ಲಿ ಹೊರಳಿ, ಮೈಲಿಗೆ ಮಾಡಿ ಕೊಳ್ಳು
ವ ಸ್ವಭಾವ ಬಿಡಲೇ ಇಲ್ಲ. ಅದು ಪದೇ ಪದೇ ತೊಳದ
ಮೇಲೆ ಬುರುದೆಯಲ್ಲಿ ಹೊರಳಿ, ಮೈಯಲ್ಲಾ ಹೊಲಸು ಮಾ
ಡಿ ಕೊಳ್ಳುತ್ತಿತ್ತು. ಆದ ಕಾರಣ ಅದರ ಯಜಮಾನನು ಅ
ದಕ್ಕೆ ಅಸಹ್ಯ ಪಟ್ಟು, ಹೇಳಿದ್ದು—ನಿನ್ನನ್ನು ಎಷ್ಟು ಶ್ರಮೆಯಿಂ
ದ ಶುದ್ಧ ಮಾಡಿದರೂ, ನೀನು ಹಂದಿಯೇ ಸರಿ; ನೀನು ಎ
ಷ್ಟು ಪರಿಯಂತರ ಹಂದಿಸ್ವಭಾವ ಬಿಡಲೊಲ್ಲೆಯೋ, ಅಷ್ಟು
ವರೆಗೆ ನಿನ್ನನ್ನು ಶುದ್ಧ ಮಾಡುವದು ವ್ಯರ್ಥವಾಗಿದೆಂದು,
ಅದನ್ನು ವಠಾರದಿಂದ ಹೊರಡಿಸಿ ಬಿಟ್ಟನು.

## ತಾತ್ಪರ್ಯವು.

ಪಾಪದ ದೆಸೆಯಿಂದ ಸರ್ವ ಮನುಷ್ಯರ ಸ್ವಭಾವವು ಕೆಟ್ಟು ಹೋಗಿದೆ. ಜನರಿಗೆ ವಿದ್ಯ ಕಲಿಸಿದರೆ, ಅವರು ಒಳ್ಳೆಯವರಾದಾರೆಂದು ಕೆಲವರು ಹೇಳುತ್ತಾರೆ. ಮತ್ತು ಅವರಿಗೆ ಭೂಗೋಳ, ಖಗೋಳ, ಲೀಲಾವತಿ, ಶಿಲ್ಪ ಇತ್ಯಾದಿ ಶಾಸ್ತ್ರಗಳನ್ನು ಕಲಿಸುತ್ತಾರೆ. ಸತ್ಯ ಮಾತಾಡಿರಿ; ತಮ್ಮ ತಮ್ಮ ಧರ್ಮದ ಪ್ರಕಾರ ನಡಿಯಿರಿ; ಪರದ್ರವ್ಯಾಶೆ ಮಾಡ ಬೇಡಿರಿ; ಮೂರ್ಖತನ ಬಿಡಿರಿ ಎಂಬ ಇತ್ಯಾದಿ ನೀತಿಬೋಧನೆ ಹೇಳಿದರೆ, ಅವರು ನೀತಿಯಿಂದ ವರ್ತಿಸುವರೆಂದು ಅನೇಕರು ನೆನಸುತ್ತಾರೆ. ಆದರೆ ಈ ಉಪಚಾರದ ಬೋಧನೆಯು ದೇವರ ದೃಷ್ಟಿಗೆ ಹಂದಿಗಳನ್ನು ತೊಳೆದ ಓಪಾದಿಯಾಗಿರುವದು. ಪಾಪವು ಮನುಷ್ಯರ ಅಂತರಸ್ವಭಾವದಲ್ಲಿ ಸೇರಿರುತ್ತದೆ; ಹೀಗಿರುವಾಗ್ಯೆ ನಾನಾ ವಿದ್ಯಗಳೂ ಲೋಕನೀತಿ ಬೋಧೆಗಳೂ ಹಂದಿಗಳ ಹೊರಪಾರ್ಶ್ವದಲ್ಲಿ ತೊಳೆದು ಶುದ್ಧ ಮಾಡಿದ ನೀರಿನ ಹಾಗಿರುವವು; ಅಲ್ಲದೆ ಅಂತರ್ಯವನ್ನು ಶುದ್ಧ ಮಾಡ ಕೂಡದು. ಇಂಥಾ ವಿದ್ಯ ಕಲಿತ ವಿದ್ವಾಂಸರು ಇನ್ನೂ ಪಾಪದ ಕೆಸರಿನಲ್ಲಿ ಹೊರಳುತ್ತಾರೆ. ದೇವರ ಮುಂದೆ ಅವರೂ ವಿದ್ಯ ಕಲಿಯದ ಕಾಡು ಜನರೂ ಪಾಪದ ವಿಷಯದಲ್ಲಿ ಏಕ ಪ್ರಕಾರವಾಗಿ ಇರುತ್ತಾರೆ. ಅವರಿಗೂ ಇವರಿಗೂ ಭೇದವಿಲ್ಲ. ಆದದರಿಂದ ಕರ್ತನಾದ ಯೇಸು ಕ್ರಿಸ್ತನು ಜನರಿಗೆ—

ನೀವು ಹೊಸತಾಗಿ ಹುಟ್ಟದಿದ್ದರೆ, ಪರಲೋಕದ ರಾಜ್ಯಕ್ಕೆ ಶೇರ ಕೂಡದೆಂದು ಹೇಳುತ್ತಾನೆ; ದೇವರು ಸರ್ವರಿಗೆ ಈ ಪುನರ್ಜನ್ಮವನ್ನು ಯೇಸುವಿನ ಮೂಲವಾಗಿ ಕೊಡುವದಕ್ಕೆ ಸಿದ್ಧವಾಗಿದ್ದಾನೆ. ಈ ಉತ್ತಮ ಜನ್ಮವು ಯೇಸುವಿನಲ್ಲಿ ವಿಶ್ವಾಸವಿಟ್ಟವರಿಗೆ ದೊರಕುವದು.

"ಒಬ್ಬನು ಮೇಲಿನಿಂದ ಹುಟ್ಟದಿದ್ದರೆ, ದೇವರ ರಾಜ್ಯವನ್ನು ನೋಡಲಾರನು." (ಯೋಹಾ. ೩, ೩.)

---

## ೧೯. ಉಪಮೆ.

## ಭಾವಿಯೊಳಗೆ ಬಿದ್ದ ಮನುಷ್ಯನು.

ಒಬ್ಬ ಮನುಷ್ಯನು ಭಾವಿಯೊಳಗೆ ಬಿದ್ದು ಮುಳುಗುವ ಗಂಡಾಂತರದಲ್ಲಿದ್ದನು. ಅಷ್ಟರಲ್ಲಿ ಒಬ್ಬನು ಆ ಭಾವಿಯ ಬಳಿಗೆ ಬಂದು, ಮುಳುಗುವ ಮನುಷ್ಯನನ್ನು ನೋಡಿ, ಅವನಿಗೆ—ಎಲೇ ಎಲೇ ಭಾವಿಯೊಳಗೆ ಬೀಳ ಬೇಡ, ಬಿದ್ದರೆ ಬಹಳ ಕಷ್ಟವಾಗುವದು, ಜಾಗ್ರತೆಯಾಗಿರು ಎಂದು ಕೂಗಿ ಹೇಳಿದನು. ಆಗ ಬೇರೊಬ್ಬ ಬುದ್ಧಿಯುಳ್ಳವನು ಅಲ್ಲಿಗೆ ಶೇರಿ, ಸಂಭವಿಸಿದ ಸಂಗತಿಯನ್ನು ತಿಳಿದು, ಅವನ ಹುಚ್ಚು ಮಾ

ತಿಗೆ ಆಶ್ಚರ್ಯ ಪಟ್ಟು, ಅವನಿಗೆ—ಎಲಾ ಮೂರ್ಖನೇ, ಭಾವಿಯೊಳಗೆ ಬಿದ್ದು ಮುಳುಗಿ ಸಾಯುವ ಮನುಷ್ಯನಿಗೆ, ನೀನು ಬೀಳ ಬೇಡ ಜಾಗ್ರತೆಯಾಗಿರು ಎಂದು ಬುದ್ಧಿ ಮಾತ್ರವೇ ಹೇಳುತ್ತೀಯೋ? ಎಂದು ಗದರಿಸಿ, ತತ್‍ಕ್ಷಣದಲ್ಲಿ ತಾನು ಒಂದು ಹಗ್ಗವನ್ನು ಭಾವಿಯೊಳಗೆ ಇಳಿಸಿ, ಆ ಸಾಯುವ ಮನುಷ್ಯನನ್ನು ಮೇಲಕ್ಕೆ ಎಳದನು. ಹೀಗೆ ಅವನು ಮೇಲೆ ಬಂದು, ತನ್ನ ಜೀವ ರಕ್ಷಿಸಿದ ಮನುಷ್ಯನಿಗೆ—ನೀನು ನನ್ನ ಜೀವದಾನವಾಗಿ ಕೊಟ್ಟೆ, ನೀನು ಮಾಡಿದ ಉಪಕಾರವು ಮಹಾ ದೊಡ್ಡದು, ಅದನ್ನು ನಾನು ಎಂದಿಗೂ ತೀರಿಸ ಕೂಡದು ಎಂದು ಹೇಳಿದನು. ಅದಕ್ಕವನು—ಹೋಗು, ಇನ್ನೂ ಮೇಲೆ ಭಾವಿಯೊಳಗೆ ಬೀಳದ ಹಾಗೆ ಜಾಗ್ರತೆಯಾಗಿರು ಎಂದು ಹೇಳಿದನು.

### ತಾತ್ಪರ್ಯವು.

ಹೀಗೆ ಸಮಸ್ತರು, ಹಿಂದು ಜನರಾಗಲಿ, ವಿಲಾಯತಿಯವರಾಗಲಿ, ಪಾಪದ ದೆಸೆಯಿಂದ ನರಕದ ಸಂಕಟದಲ್ಲಿ ಬಿದ್ದಿರುತ್ತಾರೆ. ಹೀಗಿದ್ದರೂ ಜ್ಞಾನಶೂನ್ಯರಾದ ಗುರುಗಳೂ ಬೋಧಕರೂ ಜನರಿಗೆ—ಪಾಪ ಮಾಡ ಬೇಡಿ, ಪಾಪ ಮಾಡಿದರೆ ನರಕದಲ್ಲಿ ಬೀಳುವಿರಿ, ಆದ್ದರಿಂದ ನರಕದಲ್ಲಿ ಬೀಳ ಹೋಗ ಬೇಡಿರಿ ಎಂದು

ಬರೇ ಉಪದೇಶ ಮಾಡುತ್ತಾರೆ. ಆದರೆ ಮುಂಚೆ ಜನರ ರಕ್ಷ ಣೆ ಆಗ ಬೇಕು, ಅವರು ಮಾಡಿದ ಪಾಪ ಪರಿಹಾರವಾಗ ಬೇಕು, ಆ ಮೇಲೆ ಅವಶ್ಯವಾದ ತಕ್ಕ ಉಪದೇಶ ಕೊಡ ಬೇಕು ಹೊರ ತು, ಮೊದಲೇ ಜನರಿಗೆ—ಒಳ್ಳೆಯವರಾಗಿರಿ, ಚನ್ನಾಗಿ ನಡ ಕೊ ಳ್ಳಿರಿ, ನೀತಿವಂತರಾಗಿರಿ ಎಂದು ಹೇಳುವದು ವ್ಯರ್ಥ ಉಪದೇಶ ವಾಗಿದೆ. ಜನರು ಪಾಪದಿಂದ ಮುಕ್ತರಾಗ ಬೇಕೆಂದು ಯೇಸು ಕ್ರಿಸ್ತನು ಈ ಲೋಕಕ್ಕೆ ನರಜನ್ಮವನ್ನು ತಾಳಿ ಕೊಂಡು ಬಂದಿ ದ್ದಾನೆ. ಆತನೇ ಪಾಪದ ಕುಣಿಯಲ್ಲಿ ಬಿದ್ದ ಪಾಪಿಗಳನ್ನು ಮೇ ಲೆ ತೆಗಿಯ ಬೇಕು. ಆದ ಕಾರಣ ಆತನು ಸಮಸ್ತರ ಪಾಪವ ನ್ನು ದೂರ ಮಾಡುವದಕ್ಕಾಗಿ ತಾನೇ ಮೊದಲು ಮರಣಸ್ತಂಭದ ಮೇಲೆ ತನ್ನ ಪ್ರಾಣವನ್ನು ಬಲಿಯಾಗಿ ಅರ್ಪಿಸಿದ್ದಾನೆ. ಆತನ ಇಂಥಾ ಮರಣವು ಪಾಪಿಷ್ಟರಿಗೆ ಪಾಪದ ಕುಣಿಯಿಂದ ಮೇಲೆ ಬರಲಿಕ್ಕೆ ಹಗ್ಗವಾಗಿದ್ದೆ. ಈ ಹಗ್ಗವು ಜನರನ್ನು ರಕ್ಷಿಸುವದಕ್ಕೋ ಸ್ಕರ ಅಪರಿಮಿತ ಕರುಣವುಳ್ಳ ದೇವರು ಪಾಪದ ಭಾವಿಯೊಳಗೆ ಹಾಕಿಟ್ಟಿದ್ದಾನೆ; ಈ ಹಗ್ಗವನ್ನು ಯಾರು ಹಿಡಿಯುತ್ತಾನೋ, ಅ ವನೇ ಪಾಪದ ಭಾವಿಯೊಳಗಿಂದ ಹೊರಗೆ ಬರುತ್ತಾನೆ, ಮತ್ತು ಸರ್ವ ದೋಷದಿಂದ ಮುಕ್ತನಾಗುತ್ತಾನೆ. ಇಂಥಾ ವಿಶ್ವಾಸಿಯು ಪಾಪಕ್ಕೆ ಅಸಹ್ಯ ಪಟ್ಟು, ಪಾಪದಿಂದ ಅಗಲಿ ಹೋಗುವದಕ್ಕೆ ಪ್ರಯತ್ನ ಮಾಡುತ್ತಾನೆ. ಇದಲ್ಲದೆ ಅವನು ತನ್ನನ್ನು ನರಕದ

ಕುಣಿಯಿಂದ ತೆಗಿಯುವದಕ್ಕೆ ಬಂದ ರಕ್ಷಕನ ಬಳಿಗೆ ಹೋಗಿ, ಅವನ ಬೋಧನೆಯನ್ನು ಕೇಳಿ ಮನಸ್ಸಿಡುತ್ತಾನೆ. ಆಗ ಯೇಸು ಅವನಿಗೆ ಬೋಧಿಸುವದೇನೆಂದರೆ—ಹೋಗು ಇನ್ನು ಮೇಲೆ ಪಾಪ ಮಾಡ ಬೇಡ; ಪರಿಶುದ್ಧ ಮಾರ್ಗದಲ್ಲಿ ಎಚ್ಚರಿಗೆಯಾಗಿ ನಡಿ; ವ್ಯಭಿಚಾರ, ಜಾರತ್ವ, ಅಶುದ್ಧತ್ವ, ಬಂಡುತನ, ವಿಗ್ರಹಾರಾಧನೆ, ಶೂನ್ಯ, ದ್ವೇಷ, ಹೊಟ್ಟೆಕಿಚ್ಚು, ನರಹತ್ಯ, ಅಮಲು, ದುಂದುತನ, ಇವು ಮೊದಲಾದವುಗಳಿಂದ ದೂರವಾಗಿರು ಎಂದು ಬೋಧಿಸುತ್ತಾನೆ. ಈ ಪ್ರಕಾರ ಪಾಪದ ಮೈಲಿಗೆಯಿಂದ ತೊಳೆಯಲ್ಪಟ್ಟ ಭಕ್ತನು ಯೇಸುವಿನ ಬೋಧನೇ ಪ್ರಕಾರ ನಡದು, ತನ್ನ ಮೇಲೆ ಕರುಣಾ ತೋರಿಸಿದ ದೇವರ ಮಹಾ ಉಪಕಾರವನ್ನು ನೆನಸಿ, ಅಂಥಾ ಉಪಕಾರವನ್ನು ತಾನು ಹ್ಯಾಗೆ ತೀರಿಸಲಿ? ಎಂದು, ತಾನು ಜೀವಿಸುವ ಮಟ್ಟಿಗೂ ಆತನ ದಾಸನಾಗಿ ನಡಿಯುವೆನೆಂದು ಮನಸ್ಸಿನಲ್ಲಿ ನಿರ್ಧಾರ ಮಾಡಿ ಕೊಂಡು, ಯೇಸುವಿನಲ್ಲಿ ಪೂರ್ಣ ವಿಶ್ವಾಸವಿಟ್ಟು ಆತನ ಪ್ರೀತಿಯನ್ನು ಧ್ಯಾನಿಸಿ ನಡಿಯುತ್ತಾನೆ.

"ಆದದರಿಂದ ಈಗ ಕ್ರಿಸ್ತ ಯೇಸುವಿನಲ್ಲಿದ್ದು, ಮಾಂಸದ ಪ್ರಕಾರವಲ್ಲ, ಆತ್ಮದ ಪ್ರಕಾರ ನಡಿಯುವವರಿಗೆ ಆಜ್ಞೆನಿರ್ಣಯ ಏನೂ ಇಲ್ಲ." (ರೋಮ. ೮, ೧.)

---

## ೨೦. ಉಪಮೆ.

## ಮುರಿದು ಹೋದ ಭಂಡಿಯು.

ಒಬ್ಬ ಗಾಡಿಗಾರನ ಗಾಡಿಯು ಬಿದ್ದು, ಅದರ ಚಕ್ರಗಳೂ ನೊಗ ದಂಡೆಮರ ಇತ್ಯಾದಿ ಸಾಮಾನುಗಳೂ ಮುರಿದು ಹೋಗಿ, ಅದು ಯಾವ ಕೆಲಸಕ್ಕೂ ಯೋಗ್ಯವಲ್ಲದ ಸ್ಥಿತಿಯಲ್ಲಿರುವಾಗ್ಯೆ, ಒಬ್ಬ ಮನುಷ್ಯನು ಅದನ್ನು ಕಂಡು, ಆ ಗಾಡಿಗಾರನಿಗೆ—ಎಲೇ ಈ ಚಕಡಿಯು ಸುಮ್ಮನೆ ಯಾಕೆ ಹೀಗೆ ಬಿಟ್ಟದ್ದೀ? ಅದಕ್ಕೆ ಎತ್ತುಗಳನ್ನು ಕಟ್ಟಿ, ಅದರ ಮೇಲೆ ಸಾಮಾನುಗಳನ್ನು ಹೇರಿ, ಕೆಲಸ ನಡಿಸಿದರೆ, ನಿನಗೆ ಒಳ್ಳೇ ಆದಾಯ ಶಿಕ್ಕುವದಲ್ಲವೋ? ಎಂದು ಹೇಳಿದನು. ಅದಕ್ಕೆ ಆ ಭಂಡಿಗಾರನು—ಒಳ್ಳೇ ಲಾಭ ಶಿಕ್ಕುವದು ಸರಿ; ಆದರೆ ಆ ಭಂಡಿಯು ಮುರಿದು ಹೋಗಿ, ಯಾವ ಕೆಲಸಕ್ಕೂ ಅಯೋಗ್ಯವಾಗಿದೆ; ಅದನ್ನು ದುರುಸ್ತು ಮಾಡಿದ ಹೊರತು, ಅದರ ಮೇಲೆ ಸಾಮಾನುಗಳನ್ನು ಹೇರುವದು ಅಸಾಧ್ಯವಾಗಿದೆಂದು ಉತ್ತರ ಕೊಟ್ಟನು.

### ತಾತ್ಪರ್ಯವು.

ಇದೇ ಪ್ರಕಾರ ಮನುಷ್ಯರ ಸ್ವಭಾವವು ಪಾಪದ ದೆಸೆಯಿಂ

ದ ಕೆಟ್ಟು ಹೋಗಿ, ಅವರು ದೇವರ ನೀತಿಮಾರ್ಗವನ್ನು ಬಿಟ್ಟು, ಆತನ ಆಜ್ಞೆಗಳ ಪ್ರಕಾರ ನಡಿಯಲಾರದೆ ಇದ್ಧಾರೆ. ಅವರಲ್ಲಿ ದೇವರ ಪ್ರೀತಿಯೂ ಭಕ್ತಿಯೂ ಇಲ್ಲ; ಆದರೆ ಕೆಲವರು ಮತ್ತೊಬ್ಬರಿಗೆ—ದೇವರ ಕೆಲಸವನ್ನು ಮಾಡಿರಿ, ಆತನ ಮಾರ್ಗದಲ್ಲಿ ನಡಿಯಿರಿ, ದೇವರಿಗೆ ಮಹಿಮೆ ಪಡಿಸಿರಿ, ಆತನಿಗೆ ಬೇಡಿ ಕೊಳ್ಳಿರಿ, ಎಂಬ ಇತ್ಯಾದಿ ಬುದ್ಧಿಯನ್ನು ಹೇಳುತ್ತಾರೆ. ಪರಂತು ಒಡದು ಹೋದ ಗಡಿಗೆಯಲ್ಲಿ ನೀರು ಹಾಕಿದರೆ, ನಿಲ್ಲುವದೋ? ಹೀಗೆ ಪಾಪದಿಂದ ತುಂಬಿದ ಹೃದಯದಲ್ಲಿ ದೇವರ ಪ್ರೀತಿ ಹ್ಯಾಗಿರುವದು? ಅದರಿಂದ ದೇವರ ಸೇವೆ ಹ್ಯಾಗೆ ಬರುವದು? ಹೇಳಿರಿ. ಪಾಪಿಷ್ಟರಿಗೆ ದೇವರ ಸೇವೆ ನಡಿಸುವ ಹಾಗೆ ಹೇಳುವವನು ಮುರಿದು ಹೋದ ಭಂಡೀ ಮೇಲೆ ಸಾಮಾನುಗಳನ್ನು ಹೇರುವವನ ಹಾಗೆ ಇದ್ಧಾನೆ. ಮೊದಲು ಮನುಷ್ಯನ ಹೃದಯವು ನೆಟ್ಟಗೆ ಆಗ ಬೇಕು; ಆ ಮೇಲೆ ಅದರಿಂದ ದೇವರಿಗೆ ಸಮರ್ಪಕವಾದ ಸೇವಾಕಾರ್ಯಗಳು ಆಗುವವು. ದೇವರಾತ್ಮವು ಹೃದಯವನ್ನು ನೆಟ್ಟಗೆ ಮಾಡಿ, ದೇವರ ಪ್ರೀತಿಯನ್ನೂ ಪಾಪದಿಂದ ಬರುವ ನಾಶನವನ್ನೂ ಯೇಸುವಿನಿಂದಾಗುವ ಪಾಪಪರಿಹಾರವನ್ನೂ ತೋರಿಸುತ್ತಾನೆ. ಪರಿಶುದ್ಧಾತ್ಮವು ಪಾಪಿಷ್ಟನಲ್ಲಿ ಪಶ್ಚಾತ್ತಾಪವನ್ನು ಹುಟ್ಟಿಸಿ, ಯೇಸುವಿನಲ್ಲಿ ವಿಶ್ವಾಸವಿಡುವ ಹಾಗೆ ಬಲ ಪಡಿಸುತ್ತಾನೆ. ಪರಿಶುದ್ಧಾತ್ಮ ಹೊಂದಿದ ಪಾಪಿಷ್ಟರ ಹೃದಯಗಳು ಸ್ವಚ್ಛವಾಗುತ್ತವೆ;

ಮತ್ತು ಅಂಥವರು ದೇವರ ಸೇವೆ ಮಾಡುವದಕ್ಕೆ ಸಂತೋಷದಿಂದ ಯಾವಾಗಲೂ ಸಿದ್ಧವಾಗಿರುತ್ತಾರೆ. ಈ ರೀತಿಯಿಂದಲೇ ಮನುಷ್ಯರು ದೇವರ ಮಾರ್ಗದಲ್ಲಿ ನಡಿಯ ಬೇಕು ಹೊರತು, ಒಳ್ಳೆ ಕೆಲಸ ಮಾಡಿರಿ, ಕೆಟ್ಟ ಮಾರ್ಗ ಬಿಡಿರಿ, ಪಾಪ ಮಾಡ ಬೇಡಿರಿ ಎಂಬ ಉಪದೇಶದಿಂದ ಅವರಿಗೆ ಏನೂ ಪ್ರಯೋಜನವಾಗುವದಿಲ್ಲ. ಮನುಷ್ಯರಲ್ಲಿ ಹೊಸ ಹೃದಯ ಹುಟ್ಟಿದ ಹೊರತು ಅವರು ದೇವರಿಗೆ ಮೆಚ್ಚಿಸುವ ಸೇವೆ ಮಾಡ ಕೂಡದು. ನಾವು ದೇವರಿಗೆ ಯೋಗ್ಯರಾದ ಸೇವಕರಾಗುವ ಹಾಗೆ, ಯೇಸು ಕ್ರಿಸ್ತನು ಬಂದು, ನಮಗೋಸ್ಕರ ಮಾಡ ಬೇಕಾದದ್ದೆಲ್ಲಾ ಮಾಡಿ ತೀರಿಸಿ, ಪರಲೋಕದಲ್ಲಿ ದೇವರ ಬಲ ಪಾರ್ಶ್ವದಲ್ಲಿ ಕೂತು ಕೊಂಡು, ನಮ್ಮ ರಕ್ಷಣೆಯ ನಿಮಿತ್ಯಾರ್ಥವಾಗಿ ಮಧ್ಯಸ್ತಿಕೆಯ ಕೆಲಸವನ್ನು ನಡಿಸುತ್ತಾನೆ.

"ದೇವರು ಒಬ್ಬನು; ದೇವರಿಗೂ ಮನುಷ್ಯರಿಗೂ ಮಧ್ಯಸ್ಥನು ಒಬ್ಬನು, ಮನುಷ್ಯನಾದ ಕ್ರಿಸ್ತ ಯೇಸುವೇ." (೧ ತಿಮೊ. ೨, ೫.)

---

## ೨೧. ಉಪಮೆ.

## ಕರುಣಾವುಳ್ಳ ಅರಸನು.

ಬಹು ದಯವೂ ಕೃಪೆಯೂ ಉಳ್ಳವನಾಗಿದ್ದ ಒಬ್ಬ ಅರಸನಿದ್ದನು. ತನ್ನ ಪ್ರಜೆಯು ಸುಖವುಳ್ಳದ್ದಾಗಿಯೂ ಸಮಾಧಾನ ಉಳ್ಳದ್ದಾಗಿಯೂ ಇರ ಬೇಕೆಂಬದು ಆತನ ನಿತ್ಯ ಚಿಂತೆಯಾಗಿತ್ತು. ಹೀಗಿರುವಾಗ್ಯೆ ಆತನ ಪ್ರಜೆಗಳು ಅವನಿಗೆ ತಿರುಗಿ ಬಿದ್ದು ದಂಗೆ ಮಾಡಿದರು. ಆದ ಕಾರಣ ಆ ತಿರುಗಿ ಬಿದ್ದ ದಂಗೆಯವರನ್ನು ಹಿಡಿದು ಶೆರೆಮನೆಯಲ್ಲಿ ಹಾಕಿಸಿದನು. ಆದರೆ ಅರಸನು ಶೆರೆಮನೆಗೆ ಹೋಗಿ ನೋಡುವಾಗ್ಯೆ ಅದರಲ್ಲಿದ್ದ ಸಮಸ್ತ ಶೆರೆಯವರು ನರಳುತ್ತಾ ಇದ್ದರು; ಅದನ್ನು ಕಂಡು ಅರಸನು ಅವರ ಮೇಲೆ ಮಹಾ ಅಂತಃಕರಣ ಪಟ್ಟು, ತನ್ನ ಕಾಯಿದೇ ಪ್ರಕಾರ ಅವರೆಲ್ಲರನ್ನೂ ಪಾಶಿಗೆ ಕೊಡ ಬೇಕಾಗುತ್ತದಲ್ಲ ಎಂದು ಮನಸ್ಸಿನಲ್ಲಿ ಬಹಳವಾಗಿ ನೊಂದು ಕೊಂಡು ಚಿಂತೆಯಲ್ಲಿ ಮುಳುಗಲಾರಂಭಿಸಿದನು. ಪ್ರಧಾನಿಯು ಅರಸನ ಮುಂದೆ ಬಂದು—ಸ್ವಾಮಿ, ದ್ರೋಹಿಯಾಗಿರುವ ಈ ಶೆರೆಯವರೆಲ್ಲರನ್ನು ಪಾಶಿ ಕೊಡ ಬೇಕು; ಇಲ್ಲದಿದ್ದರೆ ಬೇರೆಯವರು ಸಹಾ ಅದೇ ಪ್ರಕಾರ ತಿರು

ಗಿ ಬಿದ್ದು ರಾಜ್ಯವನ್ನೆಲ್ಲಾ ನಾಶ ಮಾಡುವರೆಂದು ಅರಸನಿಗೆ ಹೇಳಿದನು. ಪ್ರಧಾನಿ ಹೇಳಿದ ಈ ಮಾತನ್ನು ಕೇಳಿ, ಅರಸನು ಮನೆಗೆ ಹೋಗಿ ಬಹು ಚಿಂತಾಕ್ರಾಂತನಾಗಿ ದುಃಖದಿಂದ ಕೂತು ಕೊಂಡನು. ಆಗ್ಯೆ ಆ ಅರಸನಿಗೆ ಒಬ್ಬನಾಗಿ ಹುಟ್ಟಿದ ಪ್ರಿಯ ಮಗನು ಬಂದು, ಅರಸನಿಗೆ—ತಂದೆಯೇ, ನೀನು ಯಾಕೆ ದುಃಖ ಮಾಡುತ್ತೀ? ಈ ದ್ರೋಹಿಗಳಿಗೆ ನೀನು ನೇಮಿಸಿದ ಶಿಕ್ಷೆಯು ನನ್ನ ಮೇಲೆ ಬರಲಿ; ಮತ್ತು ಅವರನ್ನು ಬಿಟ್ಟು ಬಿಡು; ಹೀಗೆ ಮಾಡುವದರಿಂದ ನಿನ್ನ ನ್ಯಾಯವಾದ ನೇಮವು ಪೂರೈಸಿದ ಹಾಗೆಯೂ ನಿನ್ನ ಅಪರಿಮಿತ ಪ್ರೀತಿಯು ಪ್ರಕಟವಾಗುವ ಹಾಗೆಯೂ ಆಗುವದು ಎಂದು ತಂದೆಯನ್ನು ಸಮಾಧಾನ ಪಡಿಸಿದನು. ಆಗ ಅರಸನು ತನ್ನ ಅತಿ ಪ್ರಿಯನಾದ ಮಗನು ಹೇಳಿದ ಮಾತನ್ನು ಕೇಳಿ, ಸಮಸ್ತ ಶೆರೆಯವರನ್ನು ಕರದು, ಒತ್ತಟ್ಟು ಕೂಡಿಸಿ ನಿಲ್ಲಿಸಲು, ಅವರು ತಮಗೆ ಪಾಶಿ ಕೊಡುವ ನಿರ್ಣಯವಾಯಿತೆಂದು ಮನಸ್ಸಿನಲ್ಲಿ ಭಯ ಪಟ್ಟು, ಥರಥರನೆ ಕಂಪಿಸಲಾರಂಭಿಸಿದರು. ಆ ಸಮಯದಲ್ಲಿ ಅರಸನು ತನ್ನ ಪ್ರಿಯ ಮಗನನ್ನು ಅವರ ಮುಂದೆ ನಿಲ್ಲಿಸಿ, ಇವನು ನಿಮ್ಮ ಶಿಕ್ಷೆಯನ್ನು ಅನುಭವಿಸ ಬೇಕೆಂದು ಹೇಳಿ, ತನ್ನ ಮಗನನ್ನು ಸೇವಕರಿಂದ ಕಟ್ಟಿಸಿದನು.

ಇದಲ್ಲದೆ ಅರಸನು ಆ ಶೆರೆಯವರಿಗೆ—ಈತನು ನನ್ನ ಪ್ರಿಯ ಮಗನಾಗಿದ್ಧಾನೆ; ಈತನು ನಿಮ್ಮ ಜಾಮಿಾನುದಾರನಾಗಿ, ನಿಮಗೆ ನೇಮಿಸಿದ ಶಿಕ್ಷೆಯನ್ನು ತಾನೇ ಅನುಭವಿಸುತ್ತೇನೆಂದು ಒಪ್ಪಿ ಕೊಂಡಿದ್ದರಿಂದ ನಿಮ್ಮನ್ನು ಬಿಡುಗಡೆ ಮಾಡುತ್ತೇನೆಂದು ಹೇಳಲು, ಆ ಸೇವಕರು ಅರಸನ ಮಗನನ್ನು ಹಿಡಿದು ಕೊರ್ಡೆಗಳಿಂದ ಹೊಡಿಯಲಾರಂಭಿಸಿದರು. ಅವನ ಶ್ರಮೆಯು ಬಹು ಕಠಿಣವಾಗಿರುವದರಿಂದ ಅವನ ಸರ್ವಾಂಗ ರಕ್ತವಾಯಿತು. ಕಡೆಗೆ ಅವನು ಮರಣಕ್ಕೆ ಒಪ್ಪಿಸಲ್ಪಟ್ಟನು. ಈ ಪ್ರಕಾರ ಅರಸನ ಮತ್ತು ಅವನ ಪ್ರಿಯ ಮಗನ ಪ್ರೀತಿಯನ್ನು ಕಂಡು, ಆ ದಂಗೆ ಮಾಡಿದವರು ಮನಸ್ಸಿನಲ್ಲಿ ಚುಚ್ಚಿದವರಾಗಿ, ಅಳುತ್ತಾ ಬಡಕೊಳ್ಳುತ್ತಾ, ಅರಸನಿಗೆ—ಎಲೇ ಅರಸನೇ, ನಾವು ದುಷ್ಟರು, ನಿನ್ನ ರಾಜ್ಯದಲ್ಲಿ ದಂಗೆ ಮಾಡಿದವರಾಗಿದ್ದದರಿಂದ ನಾವು ಪಾಶಿಗೆ ಯೋಗ್ಯರಾಗಿದ್ಧೇವೆ. ಆದಾಗ್ಯೂ ನೀನು ಮಹಾ ಕೃಪೆಯುಳ್ಳವನು ಆಗಿದ್ದು ನಮ್ಮನ್ನು ಪ್ರೀತಿಯಿಂದ ಬಿಡುಗಡೆ ಮಾಡಿದ್ಧೀ; ಈಗ ನಮ್ಮನ್ನು ಪುನಃ ನಿನ್ನ ದಾಸರಾಗಿ ಅಂಗೀಕರಿಸಿ ಕೊಂಡು, ನಮ್ಮ ಸಮಸ್ತ ಅಪರಾಧಗಳನ್ನು ಮನ್ನಿಸ ಬೇಕೆಂದು ಬೇಡಿ ಕೊಂಡರು. ಆಗ ಅರಸನು ಅವರನ್ನು ಸ್ವೀಕರಿಸಿದನು; ಮತ್ತು ಅಂದಿನಿಂದ ಆ

ಅರಸನ ರಾಜ್ಯದಲ್ಲಿ ಅವರಿಗಿಂತ ಬೇರೆ ಉತ್ತಮವಾದ ಪ್ರಜೆ ಇರಲಿಲ್ಲ.

## ತಾತ್ಪರ್ಯವು.

ಈ ಪ್ರಕಾರ ದೇವರು ಪಾಪಿಷ್ಟರನ್ನು ಪ್ರೀತಿಯಿಂದ ಜೈಸುವದಕ್ಕೆ ನೋಡುತ್ತಾನೆ. ಆತನು ನಮ್ಮ ಸಮಸ್ತರ ಪಾಪದ ಸಲವಾಗಿ ನಮನ್ನು ನಾಶ ಮಾಡುವದು ಆತನಿಗೆ ಶಕ್ಯದ್ದಾಗಿತ್ತು; ಆದಾಗ್ಯೂ ಆತನು ನಮ್ಮ ಮೇಲೆ ಅಮಿತ ಪ್ರೀತಿ ಮಾಡಿ, ತನ್ನ ಒಬ್ಬನೇ ಮಗನಾಗಿರುವ ಯೇಸು ಕ್ರಿಸ್ತನನ್ನು ಕೊಟ್ಟನು; "ಯಾಕಂದರೆ, ಅವನಲ್ಲಿ ವಿಶ್ವಾಸವಿಡುವವರೆಲ್ಲರು ನಾಶವಾಗದೆ ನಿತ್ಯಜೀವವನ್ನು ಹೊಂದುವ ಬಗ್ಗೆ, ದೇವರು ಒಬ್ಬನಾಗಿ ಹುಟ್ಟಿದ ತನ್ನ ಮಗನನ್ನು ಕೊಡುವ ಹಾಗೆ, ಲೋಕವನ್ನು ಅಷ್ಟು ಪ್ರೀತಿ ಮಾಡಿದನು." ಯೇಸು ಕ್ರಿಸ್ತನು ಲೋಕಕ್ಕೋಸ್ಕರ ಅತ್ಯಂತ ದುಃಖವನ್ನು ತಾಳಿ ಕೊಂಡು, ತನ್ನ ಪ್ರಾಣವನ್ನು ಕೊಟ್ಟು ಬಿಟ್ಟನು. ಆದದರಿಂದ ಇಗೋ ದೇವರ ದಯವು ಎಷ್ಟು ದೊಡ್ಡದು! ಮತ್ತು ಯೇಸುವಿನ ಪ್ರೀತಿ ಎಷ್ಟು! ಜನರೇ, ದೇವರು ನಿಮಗೆ ಇಂಥಾ ದೊಡ್ಡ ಪ್ರೀತಿ ತೋರಿಸಿದರೂ ನೀವು ನಿಮ್ಮ ಪಾಪಕ್ಕಾಗಿ ದುಃಖ ಮಾಡಿ, ಅದನ್ನು ಬಿಟ್ಟು, ದೇವರ ಕಡೆಗೆ ಯಾಕೆ ತಿರುಗುವದಿಲ್ಲ? ಏಳಿರಿ, ಆತನ ಕೃಪೆಯನ್ನು ಅಂಗೀಕರಿಸಿರಿ; ಯೇಸುವಿನಲ್ಲಿ ವಿಶ್ವಾ

ಸವಿದಿರಿ; ಲೋಕಕ್ಕಾಗಿ ಇಷ್ಟು ದೊಡ್ಡ ಪ್ರೀತಿಯನ್ನು ತೋರಿಸಿದ ರಕ್ಷಕನಿಗೆ ಮರೆ ಹೊಕ್ಕೊಳ್ಳಿರಿ.

"ನಾವು ಇನ್ನೂ ಪಾಪಿಗಳಾಗಿರುವಾಗ, ಕ್ರಿಸ್ತನು ನಮಗೋಸ್ಕರ ಸತ್ತದರಿಂದ ದೇವರು ನಮ್ಮ ಮೇಲಿರುವ ತನ್ನ ಪ್ರೀತಿಯನ್ನು ಪ್ರತಿಷ್ಠೆ ಮಾಡುತ್ತಾನೆ." (ರೋಮ. ೫, ೮.)



# ನೀತಿಮಾರ್ಗದ ಕಥೆಗಳು.

## ೧. ಬಡ ಹುಡುಗನೂ ಐಶ್ವರ್ಯವಂತನೂ.

ಒಬ್ಬ ಒಕ್ಕಲಿಗನು ಒಂದು ದಿವಸ ತನ್ನ ಮಗನನ್ನು ಒಂದು ಕಾರ್ಯದ ನಿಮಿತ್ತ ಬೇರೊಂದೂರಿಗೆ ಕಳುಹಿಸಿ ಕೊಡ ಬೇಕಾಗಿತ್ತು. ಆ ಊರು ದೂರವಾಗಿರುವದರಿಂದ, ಆ ಹುಡುಗನು ನಡದು ಬಹಳ ದಣಿದು ಆಯಾಸದಿಂದಲೂ ಹಶಿವೆಯಿಂದಲೂ ಕಳೆಗುಂದಿ ಹೋಗುವಾಗ್ಯೆ, ಅವನ ಕೈಯಲ್ಲಿದ್ದ ಒಂದೇ ದುಡ್ಡನ್ನು ಕೊಟ್ಟು, ತನ್ನ ಹಶಿವು ತೃಪ್ತಿ ಮಾಡಲಿಕ್ಕೆ ಒಂದು ಫಲವನ್ನು ತೆಗದು ಕೊಂಡು ತಿಂದನು; ಆದಾಗ್ಯೂ ಅವನ ಹಶಿವು ಪರಿಹಾರವಾಗಲಿಲ್ಲ, ಮತ್ತು ಅವನ ಕೈಯಲ್ಲಿ ಬೇರೇನೂ ಹಣವಿರಲಿಲ್ಲ. ಹೀಗೆ ಅವನಿಗೆ ಬೇರೆ ಉಪಾಯವಿಲ್ಲದದರಿಂದ, ಅವನು ಮುಂದೆ ಮುಂದೆ ನಡಿಯುತ್ತಾ ಇರುವಾಗ್ಯೆ, ಒಬ್ಬ ಗೃಹಸ್ಥನು ಒಂದು ಸೌಂದರ್ಯವಾದ ಗಾಡಿಯಲ್ಲಿ ಕೂತು ಕೊಂಡು, ಹಿಂದೆ ಮುಂದೆ ಚಾಕ್ರಿಯವರ

ಸಂಗಡ ಹೋಗುವದನ್ನು ಕಂಡು, ತನ್ನ ಮನಸ್ಸಿನಲ್ಲಿ—ಇಂಥಾ ಗಾಡಿ ನನಗೆ ಇದ್ದರೆ, ಎಷ್ಟು ಸುಖದಿಂದ ಪ್ರಯಾಣ ಮಾಡ ಬಹುದಿತ್ತು ಎಂದು ನೆನಸಿದನು. ಆಗಲಾ ಗೃಹಸ್ಥನು ಆ ಹುಡುಗನ ದೀನಭಾವದ ಮುಖವನ್ನು ನೋಡಿ, ಅವನ ಮನಸ್ಸಿನ ಆಲೋಚನೆಯನ್ನು ತಿಳು ಕೊಂಡು—ಹುಡುಗನೇ, ನನ್ನ ಅವಸ್ಥೆ ನಿನಗೆ, ನಿನ್ನ ಅವಸ್ಥೆ ನನಗೆ, ಹೀಗೆ ನಾವು ನಮ್ಮ ಅವಸ್ಥೆಗಳನ್ನು ಹಂಚಿ ಕೊಳ್ಳುವದಕ್ಕೆ ಮನಸ್ಸುಂಟೋ? ಎಂದು ಕೇಳಿದನು. ಅದಕ್ಕೆ ಆ ಹುಡುಗನು—ಸ್ವಾಮಿ, ತಾವು ಗಾಡಿಯಿಂದ ಇಳಿದು, ತಮಗೆ ಇದ್ದದನ್ನೆಲ್ಲಾ ನನಗೆ ಕೊಟ್ಟರೆ, ನಾನು ಅದಕ್ಕೆ ಒಪ್ಪಿ ಕೊಂಡು ನನಗೆ ಇದ್ದದ್ದನ್ನೆಲ್ಲಾ ತಮಗೆ ಕೊಡುವೆನೆಂದು, ಆಲೋಚನೆ ಮಾಡದೆ ಮಾತು ಕೊಟ್ಟನು. ಹೀಗೆ ಹುಡುಗನು ಉತ್ತರ ಕೊಟ್ಟ ಮೇಲೆ, ಆ ಧೊರೆಯು ತನ್ನ ಸೇವಕರನ್ನು ಕರದು, ತನ್ನನ್ನು ಗಾಡಿಯಿಂದ ಕೆಳಗೆ ಇಳಿಸಿರಿ, ಅಂದನು. ಅವರು ಅವನನ್ನು ಗಾಡಿಯಿಂದ ಇಳಿಸುವಾಗ್ಯೆ ಅವನು ಕುಂಟನಾಗಿದ್ದದ್ದನ್ನು ನೋಡಿ, ಆಶ್ಚರ್ಯ ಪಟ್ಟನು; ಏನಂದರೆ, ಅವನಿಗೆ ಕಾಲುಗಳ ಸಹಾಯವಿಲ್ಲದೆ, ಸೇವಕರ ಸಹಾಯವು ಅವಶ್ಯವಾಗಿತ್ತು; ಮತ್ತು ನಡಿಯ ಕೂಡದೆ ಇರುವದರಿಂದ ಗಾಡಿಯು ಅವಶ್ಯವಾಗಿತ್ತು.

ಆಗಲಾ ಧೊರೆಯು ಹುಡುಗನಿಗೆ--ನಮ್ಮ ಅವಸ್ಥೆಗಳನ್ನು ಬದಲು ಮಾಡಿ ಕೊಳ್ಳುವಾ, ಬಾ, ಅಂದನು. ಅದಕ್ಕೆ ಹುಡುಗನು ಘಾಬರಿಯಾಗಿ—ನನಗೆ ನಿಮ್ಮ ಅವಸ್ಥೆ ಬೇಡವೇ ಬೇಡಾ; ನನ್ನನ್ನು ನಡಿಸುವ ಕಾಲುಗಳು ಸುಖವಾಗಿದ್ದರೆ, ಸಾವಿರ ಗಾಡಿಗಳಿಗಿಂತಲೂ ಕುದುರೆಗಳಿಗಿಂತಲೂ ಅಧಿಕವಾದವುಗಳಾಗಿವೆ; ಮತ್ತೊಬ್ಬರು ಕೈ ಹಿಡಿದು ನಡಿಸುವ ಈ ಕಠಿಣ ಸ್ಥಿತಿಯಲ್ಲಿ ಶೇರಿ, ನಿತ್ಯವಾಗಿ ಮಿಠಾಯಿ ತಿನ್ನುವದು ಸವಿಯಾಗಲಾರದು; ತನ್ನ ಶರೀರವು ನೆಟ್ಟಗೆ ಇದ್ದು ಹೊತ್ತಿಗೆ ಉಪ್ಪನ್ನ ಉಣ್ಣುವದಕ್ಕಿಂತ ಹೆಚ್ಚಿನ ಸುಖವು ಯಾವದೂ ಇಲ್ಲ, ಅಂದನು. ಆಗ ಆ ಗೃಹಸ್ಥನು ಹುಡುಗನಿಗೆ—ನನಗೆ ಪ್ರಾಪ್ತಿಯಾದಂಥ ಕಠಿಣ ಸ್ಥಿತಿಯು ನಿನಗೆ ಎಂದಿಗೂ ಉಂಟಾಗದೆ ಇರಲಿ ಎಂದು ಹೋಗಿ ಬಿಟ್ಟನು. ಆ ಮೇಲೆ ಹುಡುಗನು ಮುಂದೆ ಹೋದನು.

ಸೇವಕರು ಆ ಕುಂಟನಾದ ಐಶ್ವರ್ಯವಂತನನ್ನು ಎತ್ತಿಕೊಂಡು ಗಾಡಿಯಲ್ಲಿರಿಸುವಾಗ, ಅವನವರಿಗೆ ಹೇಳಿದ್ದು—ಆ ಹುಡುಗನ ಹಾಗೆ ನನಗೆ ಬಲವುಳ್ಳ ಕಾಲುಗಳಿದ್ದರೆ, ನನಗೆ ಗಾಡಿಯೂ ದ್ರವ್ಯವೂ ಯಾತಕ್ಕೆ ಬೇಕು? ಯಾರಾದರೂ ನನಗೆ ತ್ರಾಣವುಳ್ಳ ಕಾಲುಗಳನ್ನು ಕೊಟ್ಟರೆ, ಅವರಿಗೆ ನನ್ನ ಸ

ರ್ವ ಐಶ್ವರ್ಯವನ್ನು ಕೊಡುವೆನು; ಇದು ನಿಶ್ಚಯವೇ; ಯಾಕಂದರೆ, ಬಡವನಾಗಿದ್ದು ದೇಹಸ್ಥಿತಿಯು ಎಲ್ಲಾ ವಿಷಯದಲ್ಲಿ ನೆಟ್ಟಗೆ ಇದ್ದರೆ, ಐಶ್ವರ್ಯವಂತನಿಗಿಂತ ಸುಖಿಯಾಗಿರುವೆನು, ಅಂದನು.

ಪ್ರಿಯ ಹುಡುಗರೇ, ಇದರಿಂದ ತಿಳು ಕೊಳ್ಳ ಬೇಕಾದದ್ದೇನೆಂದರೆ—ತನಗಿದ್ದ ಸ್ಥಿತಿಯನ್ನು ತಿರಸ್ಕರಿಸಿ ಹೆಚ್ಚಿನ ಸ್ಥಿತಿಗೆ ಲಕ್ಷ್ಯವಿಡ ಬಾರದು; ನಿರ್ಮಾಣಿಕನಾದ ದೇವರು ತನ್ನನ್ನು ಯಾವ ಸ್ಥಿತಿಯಲ್ಲಿಟ್ಟಿದ್ದಾನೋ ಆ ಸ್ಥಿತಿಯಲ್ಲಿಯೇ ತೃಪ್ತಿ ಪಟ್ಟಿರ ಬೇಕು. ಮತ್ತೊಬ್ಬರ ಸ್ಥಿತಿಯಲ್ಲಿ ಶೇರ ಅಪೇಕ್ಷೆ ಮಾಡ ಬಾರದು; ಮತ್ತು ಹೊರ ಕಡೆ ರಮ್ಯವಾಗಿ ಕಾಣುವ ಹಣ್ಣುಗಳ ಒಳಗೆ ಸವಿಯಾದದ್ದು ಶಿಕ್ಕುವದೆಂದು ವಿಚಾರ ಮಾಡದೆ ನಿಶ್ಚಯಿಸ ಬಾರದು. ಹೊರಗೆ ಸೌಂದರ್ಯವಾಗಿ ಕಾಣುವ ವಸ್ತುಗಳಿಂದ ಬಹಳ ಕೇಡು ಬರುವದುಂಟು. ಸುಖದ ಮೂಲವು ದ್ರವ್ಯವಲ್ಲ; ಸುಖದ ಮೂಲವು ಒಳ್ಳೇ ದೇಹಪ್ರಕೃತಿಯೂ ಅಲ್ಲ; ಆದರೆ ಸುಖದ ಮೂಲವು ಶುದ್ಧ ಹೃದಯವೇ. ಯಾರ ಹೃದಯವು ಶುದ್ಧವಾಗಿದೆಯೋ, ಅವನು ಎಂಥಾ ಸ್ಥಿತಿಯಲ್ಲಿದ್ದರೂ ಸುಖಿಯಾಗಿರುವನು.

ಐಶ್ವರ್ಯವಿಲ್ಲದೆಯೂ ಒಳ್ಳೇ ದೇಹಪ್ರಕೃತಿ ಇಲ್ಲದೆಯೂ

ಇದ್ದು ದೇವರ ಆತ್ಮದ ಕೃಪೆಯಿಂದ ಪಾಪದ ಮೇಲೆ ಅಸಹ್ಯ ಹುಟ್ಟಿ, ದೇವರ ಮೇಲೆಯೂ ಆತನ ಮಾರ್ಗದಲ್ಲಿಯೂ ಪ್ರೀತಿ ಹುಟ್ಟಿ, ಶುದ್ಧ ಹೃದಯ ಶಿಕ್ಕಿದರೆ, ಅದು ಸುಖವಾಗಿರುವದು. ಆದದರಿಂದ ಪ್ರಿಯ ಹುಡುಗರೇ, ನೀವು ಸುಖವುಳ್ಳವರಾಗಿರ ಬೇಕಾದರೆ, ನಿಮಗೆ ಶುದ್ಧ ಹೃದಯ ಶಿಕ್ಕುವ ಹಾಗೆ ದೇವರಿಗೆ ಪ್ರಾರ್ಥನೆ ಮಾಡಿರಿ.

---

## ೨. ಸೋಮಾರಿ ಹುಡುಗನು ಮತ್ತು ಉದ್ಯುಕ್ತ ಹುಡುಗನು.

ಒಂದಾನೊಂದು ದೊಡ್ಡ ಪಟ್ಟಣದ ಸಮೀಪದಲ್ಲಿ ಒಂದು ಊರು ಇತ್ತು. ಅದರಲ್ಲಿ ಒಬ್ಬ ಐಶ್ವರ್ಯವುಳ್ಳ ಒಕ್ಕಲಿಗನು ತನ್ನ ಕುಟುಂಬ ಸಹಿತ ವಾಸ ಮಾಡುತ್ತಿದ್ದನು. ಅವನಿಗೆ ಬಹಳ ಭೂಮಿಯಿತ್ತು; ಮತ್ತು ಅವನಿಗೆ ನಾರಾಯಣ, ರಾಮಕೃಷ್ಣ ಎಂಬ ಇಬ್ಬರು ಹುಡುಗರಿದ್ದರು. ಚಿಕ್ಕ ಮಗನಾದ ರಾಮಕೃಷ್ಣನೆಂಬವನು ಹುಟ್ಟಿದ ದಿವಸ ಅವನು ಎರಡು ಒಳ್ಳೇ ಮಾವಿನ ಗಿಡಗಳನ್ನು ತನ್ನ ತೋಟದಲ್ಲಿ ನಟ್ಟು ಅವುಗಳು ಸಮವಾಗಿ ಬೆಳಿಯುವ ಹಾಗೆ ಪ್ರಯತ್ನ

ಮಾಡಿದನು. ಆದದರಿಂದ ಅವು ಎರಡೂ ಸಮವಾಗಿ ಬೆಳದವು. ಅವುಗಳನ್ನು ನೋಡಿದವರು, ಅವು ಎರಡೂ ಏಕ ಪ್ರಕಾರದ ಗಿಡಗಳಾಗಿದ್ದದರಿಂದ, ಅವುಗಳಲ್ಲಿ ಒಳ್ಳೇದು ಯಾವದು? ಕೆಟ್ಟದ್ದು ಯಾವದು? ಎಂಬ ಭೇದ ತಿಳಿಯ ಕೂಡದಿತ್ತು. ಆ ಇಬ್ಬರು ಹುಡುಗರು ಒಕ್ಕಲುತನದ ಉದ್ಯೋಗದಲ್ಲಿ ಪ್ರವೇಶವಾದರು. ಒಂದು ದಿವಸ ತಂದೆಯು ಅವರನ್ನು ಒಳ್ಳೇ ಸಮಯದಲ್ಲಿ ತನ್ನ ಸಂಗಡ ಕರಕೊಂಡು ತೋಟದಲ್ಲಿ ತಿರುಗಾಡಲಿಕ್ಕೆ ಹೋದನು. ಆಗ್ಯೆ ಅಲ್ಲಿ ಆ ಮಾವಿನ ಸಶಿಗಳನ್ನು ಅವರಿಗೆ ತೋರಿಸಿ—ನೋಡಿರಿ, ಈ ಮಾವಿನ ಸಶಿಗಳನ್ನು ನಿಮಗೋಸ್ಕರ ನಟ್ಟಿದ್ಧೇನೆ; ಮತ್ತು ಅವುಗಳಿಗೆ ನಿಮ್ಮ ಹೆಸರುಗಳನ್ನಿಟ್ಟಿದ್ಧೇನೆ; ನೋಡಿರಿ, ಈ ಗಿಡಗಳು ಎಷ್ಟು ದೊಡ್ಡವಾದವು; ಈಗ ಅವುಗಳಿಗೆ ತುಂಬ ಚಿಗುರುಂಟು, ಅಂದನು. ಆಗಲಾ ಹುಡುಗರು ಆಶ್ಚರ್ಯ ಪಟ್ಟು, ಒಮ್ಮೆಗನೇ ಘಟ್ಟಿಯಾಗಿ ಕೂಗಿ, ತಂದೆಯ ಸಂಗಡ ಮಾತಾಡಲಾರಂಭಿಸಿ—ಹಾಹಾ, ಈ ಗಿಡಗಳು ಎಷ್ಟು ಒಳ್ಳೆಯವುಗಳಾಗಿ ಕಾಣುತ್ತವೆ! ಅಂದರು. ಆಗ ತಂದೆಯು—ಹಾಗಾದರೆ ಒಳ್ಳೇದು, ಈ ಗಿಡಗಳನ್ನು ನೀವು ಚನ್ನಾಗಿ ಸಂರಕ್ಷಣೆ ಮಾಡುತ್ತೇವೆಂದು ವಚನ ಕೊಟ್ಟರೆ, ಅವುಗಳನ್ನು ನಿಮ್ಮ ಸ್ವಾಧೀನ ಮಾಡಿ

ಕೊಡುತ್ತೇನೆ; ಅವುಗಳನ್ನು ನೀವು ಎಷ್ಟು ಕಷ್ಟ ಪಟ್ಟು ಪರಾಂಬರಿಕೆ ಮಾಡುವಿರೋ, ಅಷ್ಟು ಒಳ್ಳೇ ಸೊಂಪಾಗಿ ಬೆಳಿಯುವವು, ಅಂದನು. ಅದಕ್ಕವರು, ಒಳ್ಳೇದೆಂದು ಒಪ್ಪಿ ಕೊಂಡದರಿಂದ, ತಂದೆಯು ಆ ಮಾವಿನ ಗಿಡಗಳನ್ನು ಆ ಇಬ್ಬರು ಮಕ್ಕಳಿಗೆ ಕೊಟ್ಟನು.

ತರುವಾಯ ಚಿಕ್ಕ ಮಗನಾದ ರಾಮಕೃಷ್ಣನು ತನ್ನ ಗಿಡದ ವಿಷಯದಲ್ಲಿ ಬಹು ಚಿಂತೆ ಮಾಡಿ, ಅದನ್ನು ಕಷ್ಟದಿಂದ ಜೋಪಾನ ಮಾಡಲಾರಂಭಿಸಿದನು. ಅವನು ಮಾವಿನ ಗಿಡಕ್ಕೆ ಹುಳ ಹಿಡಿಯದ ಹಾಗೆ ಆಗ್ಯಾಗ್ಯೆ ನೋಡಿ, ಅದರ ಬುಡದಿಂದ ಕಸ ಇತ್ಯಾದಿ ತೆಗದು, ಅದರ ಸುತ್ತು ಕಟ್ಟೆ ಕಟ್ಟಿ, ಅದು ಚನ್ನಾಗಿ ಬೆಳಿಯುವ ಹಾಗೆ ಅದರ ಬುಡಕ್ಕೆ ಗೊಬ್ಬರ ಹಾಕಿ, ಅದನ್ನು ಅತಿ ಜಾಗ್ರತೆಯಿಂದ ಸಂರಕ್ಷಣೆ ಮಾಡುತ್ತಾ ಬಂದನು. ಹೀಗೆ ರಾಮಕೃಷ್ಣನು ತನ್ನ ಮಾವಿನ ಗಿಡವನ್ನು ಪ್ರೀತಿ ಮಾಡಿ ಸಂರಕ್ಷಣೆ ಮಾಡಿದನು; ತಾಯಿಯಾಗಿದ್ದವಳೊಬ್ಬಳು ತನ್ನ ಮಕ್ಕಳನ್ನು ಅಷ್ಟು ಪ್ರೀತಿ ಮಾಡಲಾರಳು.

ಆದರೆ ಅವನ ಅಣ್ಣನಾದ ನಾರಾಯಣನು ತನ್ನ ಮಾವಿನ ಗಿಡವನ್ನು ಬೇರೆ ರೀತಿಯಲ್ಲಿ ಸಾಕಿದನು. ಅವನು ಆಲಸ್ಯದಿಂದ ಕೂತು ಕೆಲಸ ಮಾಡದೆ ಸೋಮಾರಿತನದಲ್ಲಿ

ಕಾಲ ಕಳೆಯುತ್ತಾ ಬಂದನು. ಅವನು ದಾರಿಯಲ್ಲಿ ನಿಂತು ಕೊಂಡು, ಮಾರ್ಗಸ್ಥರ ಮೇಲೆ ಕಲ್ಲುಗಳನ್ನು ಎಸೆದು ತಂಟೆ ಮಾಡುವದು ಅವನ ಮುಖ್ಯ ವ್ಯಸನವಾಗಿತ್ತು. ಪೇಟೆ ಬೀದಿಗಳಲ್ಲಿ ತಿರುಗಾಡುವ ಘಟಿಂಗರ ಸಂಗಡ ಕೂಡಿ ಕೊಂಡು, ಮೈಯಲ್ಲಿ ಘಾಯವಾಗಿ ರಕ್ತ ಸೋರುವ ಹಾಗೆ ಜನರ ಸಂಗಡ ಝುಗಳ ಮಾಡುವದೂ ಬಡದಾಡುವದೂ ಇದೇ ಅವನ ಕೆಲಸವಾಗಿತ್ತು. ಹೀಗಾಗಿ ಅವನಿಗೆ ಮಾವಿನ ಗಿಡದ ಹಂಬಲಿಕೆಯೇ ಇರಲಿಲ್ಲ.

ಫಲಕಾಲದ ಸಮಯದಲ್ಲಿ ಒಂದು ದಿವಸ ಅಕಸ್ಮಾತ್ತಾಗಿ ತಮ್ಮನ ಗಿಡವು ಮಾವಿನ ಹಣ್ಣುಗಳಿಂದ ತುಂಬಿರುವಂಥಾದ್ದು ಕಂಡು, ತನ್ನ ಗಿಡವು ಸಹಾ ಅದೇ ಪ್ರಕಾರ ಹಣ್ಣುಗಳಿಂದ ತುಂಬಿರುವದೆಂದು ಮನಸ್ಸಿನಲ್ಲಿ ಸಂತೋಷ ಪಟ್ಟು, ತನ್ನ ಗಿಡದ ಬಳಿಗೆ ಬಂದನು. ಆಗ್ಯೆ ಅದರ ಮೇಲೆ ಒಂದಾದರೂ ಹಣ್ಣು ದೃಷ್ಟಿಗೆ ಬೀಳದೆ, ಬಾಡಿದ ಎಲೆಗಳನ್ನು ಮಾತ್ರ ಕಂಡು, ಬಹು ದುಃಖ ಪಟ್ಟು, ತಂದೆಯ ಬಳಿಗೆ ಓಡಿ ಹೋಗಿ—ತಂದೆಯೇ, ನೀನು ಫಲವಾಗಲಾರದ ಚೋಕು ಗಿಡ ನನಗೆ ಕೊಟ್ಟಿದ್ದೀ, ಮತ್ತು ರಾಮಕೃಷ್ಣನಿಗೆ ಫಲ ಫಲಿಸುವ ಒಳ್ಳೇ ಗಿಡ ಕೊಟ್ಟಿದ್ಧೀ, ಇಂಥಾ ಪಕ್ಷಪಾತ ಮಾಡಿದ್ದರಿಂದ ನನ್ನ ತ

ಮ್ಮನ ಮರದಿಂದ ನನಗೆ ನಿತ್ಯವಾಗಿ ಮಾವಿನ ಹಣ್ಣು ಕೊಡಿಸ ಬೇಕೆಂದು ಹೇಳಿದನು. ಆಗ ಅವನ ತಂದೆಯು ಅವನಿಗೆ— ಕಷ್ಟ ಪಟ್ಟು, ಕೃಷಿ ಮಾಡಿ ಬಹು ಜಾಗ್ರತೆಯಿಂದ ಬೆಳಿಸಿದ ಮರದ ಫಲವನ್ನು ಆಲಸ್ಯದಿಂದ ಕಾಲ ಕಳೆದ ಸೋಮಾರಿಗೆ ಕೊಡುವ ಹಾಗೆ ವಿಭಾಗಿಸಿ ಅದರಿಂದ ಪಾಲು ಕೊಡುವದು ಯೋಗ್ಯವಲ್ಲ; ನಿನ್ನ ಗಿಡಕ್ಕೆ ಫಲ ಬಾರದೆ ಇದ್ದದ್ದು ನ್ಯಾಯವೇ. ಏನಂದರೆ: ನೀನು ಗಿಡದ ವಿಷಯವಾಗಿ ಏನೂ ಚಿಂತೆಯಿಂದ ಕಷ್ಟ ಮಾಡಲಿಲ್ಲ. ಕಷ್ಟ ಪಡದಿದ್ದರೆ ಫಲವು ಹ್ಯಾಗೆ ಪ್ರಾಪ್ತಿಯಾಗುವದು? ನೋಡು, ನಿನ್ನ ತಮ್ಮನು ಕಷ್ಟ ಪಟ್ಟದರಿಂದ ಅವನ ಗಿಡಕ್ಕೆ ಫಲವಾಯಿತು. ಆ ಗಿಡಗಳನ್ನು ನಿಮ್ಮ ಇಬ್ಬರ ವಶ ಕೊಡುವಾಗ್ಯೆ, ಅವು ಎರಡೂ ಏಕ ರೀತಿಯಲ್ಲಿ ಸೊಂಪಾಗಿ ಇರಲಿಲ್ಲವೋ? ಈಗ ಕೇಳು, ನಿನ್ನ ಗಿಡಕ್ಕೆ ಫಲ ಬಾರದೆ ಇರಲಿಕ್ಕೆ ಕಾರಣವೇನೆಂದು ಹೇಳುತ್ತೇನೆ: ನಿನ್ನ ತಮ್ಮನು ತನ್ನ ಗಿಡದ ವಿಷಯದಲ್ಲಿ ಬಹಳ ಚಿಂತೆ ಮಾಡಿ, ಅದರಲ್ಲಿ ಒಂದೂ ಹುಳ ವಾಸ ಮಾಡಗೊಡದೆ, ಆಗ್ಯಾಗ್ಯೆ ನೋಡಿ, ಬಹು ಕಷ್ಟದಿಂದ ತನ್ನ ಗಿಡವನ್ನು ಜೋಪಾನ ಮಾಡುತ್ತಾ ಬಂದನು. ಆದರೆ ನೀನು ಗಿಡದ ಗೊಡವೆ ಮಾಡದೆ ಹಾಗೆ ಬಿಟ್ಟದರಿಂದ ಅದಕ್ಕೆ ಫಲವಾಗದೆ

ಇರುವದು ಆಶ್ಚರ್ಯವಲ್ಲ. ನೀನು ಗಿಡಕ್ಕಾಗಿ ಕಷ್ಟ ಪಡದೆ ಹೋದರಿಂದ ಅದಕ್ಕೆ ಫಲ ಹುಟ್ಟಲಿಲ್ಲ; ಆದ್ದರಿಂದ ನಾನು ಆ ಗಿಡವನ್ನು ನಿನ್ನಿಂದ ಹಿಂದೆ ತೆಗದು ಕೊಂಡು ನಿನ್ನ ತಮ್ಮನಿಗೆ ಕೊಡುವೆನು; ಯಾಕಂದರೆ ನೀನು ಆ ಗಿಡದ ಸಂರಕ್ಷಣೆಯ ವಿಷಯದಲ್ಲಿ ಕೊಟ್ಟ ವಚನವನ್ನು ಮುರಿದು ಬಿಟ್ಟೇ; ಇನ್ನು ಮುಂದೆ ಆ ಗಿಡದ ಮೇಲೆ ನಿನಗೇನೂ ಸ್ವತಂತ್ರ ಇಲ್ಲ; ಅದಕ್ಕೆ ಫಲವಾದರೆ, ಅವನೇ ತೆಗದು ಕೊಳ್ಳುವನು; ನಿನಗೆ ಮನಸ್ಸು ಇದ್ದರೆ ತೋಟದಲ್ಲಿ ಇರುವ ಬೇರೆ ಮಾವಿನ ಗಿಡಗಳಲ್ಲಿ ನೀನು ಒಂದನ್ನು ಆರಿಸಿ ಕೊಳ್ಳ ಬಹುದು; ಮತ್ತು ಅದನ್ನು ನೀನು ಹ್ಯಾಗೆ ಸಂರಕ್ಷಣೆ ಮಾಡುತ್ತೀ? ಎಂದು ನಾನು ನಿನ್ನ ಪರೀಕ್ಷೆ ಮಾಡುವೆನು; ನೀನು ಆ ಗಿಡಕ್ಕೂ ಸಹಾ ಸಂರಕ್ಷಣೆ ಮಾಡದೆ ಹೋದರೆ, ಅದನ್ನು ಸಹಾ ನಿನ್ನಿಂದ ತೆಗದು ನಿನ್ನ ತಮ್ಮನಿಗೆ ಕೊಡುವೆನು; ಯಾಕಂದರೆ ಅವನು ಒಳ್ಳೇ ಕಷ್ಟಗಾರನಾಗಿದ್ದಾನೆ.

ತಂದೆಯು ಹೇಳಿದ ಈ ಮಾತನ್ನು ಕೇಳಿ, ಹುಡುಗನು ಮನಸ್ಸಿನಲ್ಲಿ ಗ್ರಹಿಕೆ ತಂದು, ಅದರ ಪ್ರಕಾರ ನಡಿಯ ಮನಸ್ಸು ಹಿಡಿದು, ತೋಟಕ್ಕೆ ಹೋಗುವಾಗ್ಯೆ ತನ್ನ ಮನಸ್ಸಿನಲ್ಲಿ ಆಲೋಚಿಸಿದ್ದು—ನನ್ನ ತಂದೆಯು ನೀತಿಯುಳ್ಳವನೂ ಪ್ರೀತಿ

ಯುಳ್ಳವನೂ ಆಗಿದ್ಧಾನೆ; ಅವನು ಮಾಡಿದ್ದು ನನಗೆ ತಕ್ಕ ಶಿಕ್ಷೆಯಾಗಿದೆ; ನಾನು ಒಳ್ಳೆಯವನಾಗ ಬೇಕೆಂದು ಅವನು ನನ್ನ ಪರೀಕ್ಷೆ ಮಾಡ ಇಚ್ಛೈಸುತ್ತಾನೆ ಎಂಬ ವಿಚಾರದಿಂದ ತೋಟದೊಳಗೆ ಶೇರಿದನು. ಅಲ್ಲಿ ಒಂದು ಒಳ್ಳೇ ಮಾವಿನ ಗಿಡವನ್ನು ನೋಡಿ, ಬೇರೊಂದಿಗೆ ಹೊರಗೆ ತೆಗದು, ತನ್ನ ತೋಟದೊಳಗೆ ನೆಟ್ಟನು. ಆಗಲವನ ತಮ್ಮನು ಬಂದು, ಅದು ಯಾವ ರೀತಿಯಲ್ಲಿ ಬೆಳಿಸ ಬೇಕೆಂದು ಅವನಿಗೆ ತೋರಿಸಿ ಕೊಟ್ಟು, ಸಹಾಯ ಮಾಡಿದನು. ಅಂದಿನಿಂದ ಆ ನಾರಾಯಣನೆಂಬ ಹುಡುಗನು ಆಲಸ್ಯವನ್ನು ಬಿಟ್ಟು, ಕೆಟ್ಟ ಹುಡುಗರ ಸಹವಾಸವನ್ನು ಪರಿತ್ಯಜಿಸಿ, ಸದ್ಗುಣವುಳ್ಳವರ ಗೆಳೆತನ ಮಾಡಿ, ಜಾಗ್ರತೆಯುಳ್ಳವನಾಗಿ, ಒಳ್ಳೇ ರೀತಿಯಲ್ಲಿ ನಡದು, ತನ್ನ ಗಿಡದ ವಿಷಯದಲ್ಲಿ ಬಹಳ ಕಷ್ಟ ಪಟ್ಟು, ಅದನ್ನು ಸಂರಕ್ಷಣೆ ಮಾಡಿದ್ದರಿಂದ ಅವನಿಗೆ ಒಳ್ಳೇ ಫಲ ಪ್ರಾಪ್ತವಾಯಿತೆಂಬದು ಮಾತ್ರವಲ್ಲದೆ, ಅವನ ಕೆಟ್ಟ ವ್ಯಸನಗಳೆಲ್ಲಾ ಹೋಗಿ, ಉತ್ತಮ ಹುಡುಗನಾದನು.

ತಂದೆಯು ತನ್ನ ಸೋಮಾರಿ ಹುಡುಗನು ಪೂರ್ಣವಾಗಿ ಒಳ್ಳೆಯವನಾದದ್ದು ನೋಡಿ, ಸಂತೋಷ ಪಟ್ಟು, ಆ ಮರದಲ್ಲಿ ಆಗಿದ್ದ ಹಣ್ಣುಗಳನ್ನೆಲ್ಲಾ ಅವನಿಗೆ ಕೊಟ್ಟು,

ತರುವಾಯ ತನ್ನ ತೋಟದಲ್ಲಿದ್ದ ಮಾವಿನ ಮರಗಳೆಲ್ಲಾ ತನ್ನ ಇಬ್ಬರು ಹುಡುಗರಿಗೆ ಹಂಚಿ ಕೊಟ್ಟನು.

ನನ್ನ ಪ್ರಿಯ ಹುಡುಗರೇ, ನೋಡಿರಿ, ಸೋಮಾರಿ ಹುಡುಗನಿಗೆ ಏನಾದರೂ ಒಳ್ಳೇದು ಪ್ರಾಪ್ತಿ ಆಗುವದಿಲ್ಲ. ನೋಡಿರಿ, ಅಣ್ಣನು ಆರಂಭದಿಂದ ತನ್ನ ಗಿಡವನ್ನು ಚನ್ನಾಗಿ ಪರಾಂಬರಿಸದೆ ಹೋದದರಿಂದ ಅವನಿಗೆ ಫಲ ಉಂಟಾಗಲಿಲ್ಲ; ಆದರೆ ತರುವಾಯ ಚನ್ನಾಗಿ ಕಷ್ಟ ಪಟ್ಟು ಪರಾಂಬರಿಸಿದ ಗಿಡವು ಅವನಿಗೆ ಬಹಳ ಫಲ ಕೊಟ್ಟಿತು. ಆದದರಿಂದ ನೀವು ಸಮಸ್ತ ಕೆಟ್ಟ ವ್ಯಸನಗಳನ್ನು ಬಿಟ್ಟು, ಅವನ ಹಾಗೆಯೇ ನಡಕೊಂಡರೆ, ನಿಮಗೂ ಒಳ್ಳೇ ಫಲ ಪ್ರಾಪ್ತಿಯಾಗಿ ಸುಖ ಉಂಟಾಗುವದು. ನಿಮ್ಮ ಆಟದ ಗೆಳೆಯರಲ್ಲಿ ಕೆಟ್ಟ ಹುಡುಗರಿದ್ದರೆ, ಅವರ ಸಂಗವನ್ನು ಬಿಟ್ಟು ಬಿಡಿರಿ; ಇಲ್ಲದಿದ್ದರೆ ನೀವು ಸಹಾ ಅವರ ಹಾಗೆಯೇ ಆಗುವಿರಿ. ಒಳ್ಳೆಯವರ ಸಹವಾಸದಿಂದ ಒಳ್ಳೇ ಗುಣ ಬರುತ್ತದೆ; ಕೆಟ್ಟವರ ಸಹವಾಸದಿಂದ ಕೆಟ್ಟ ಗುಣ ಬರುತ್ತದೆ ಎಂದು ಖಚಿತವಾಗಿ ಹೇಳುತ್ತೇನೆ. ಸುಖಿಯರಾಗಿಯೂ ಸಂತೋಷವುಳ್ಳವರಾಗಿಯೂ ಇರಬೇಕಾದರೆ, ನೀವು ಆಲಸ್ಯವನ್ನು ಬಿಟ್ಟು, ಜಾಗ್ರತೆಯಿಂದಲೂ ವಿಧೇಯತ್ವದಿಂದಲೂ ತಂದೆ ತಾಯಿಗಳ ಆಜ್ಞೆಗಳನ್ನು ನಡಿ

ಸಿರಿ. ಸೋಮಾರಿಗಳು ಭೂಮಿಗೆ ಭಾರವಾಗಿದ್ದಾರೆ; ಅವರ ಮೇಲೆ ದೇವರ ಕೋಪ ಉರಿಯುವದು. ದೇವರು ಸರ್ವರಿಗೆ ಕೆಲಸ ಮಾಡ ಬೇಕೆಂದು ಅಪ್ಪಣೆ ಕೊಟ್ಟಿದ್ದಾನೆ. ಏನೂ ಕೆಲಸ ಮಾಡದೆ ಸುಮ್ಮನೆ ಕೂತು ಕೊಳ್ಳುವವನ ಮನಸ್ಸಿನಲ್ಲಿ ಬಹಳ ಕೆಟ್ಟ ಆಲೋಚನೆಗಳು ಹುಟ್ಟುವವು. ಆಲಸ್ಯ ಮಾಡುವದೇ ಪಾಪವಾಗಿದೆ.

---

## ೩. ಲೋಭಿ ಹುಡುಗನು.

ಒಬ್ಬ ಐಶ್ವರ್ಯವುಳ್ಳ ವರ್ತಕನಿಗೆ ಒಬ್ಬ ಮಗನಿದ್ದನು. ತಂದೆಯು ಆ ಹುಡುಗನನ್ನು ಬಹಳ ಪ್ರೀತಿ ಮಾಡುತ್ತಿದ್ದನು. ಕೆಲವು ವಿಷಯದಲ್ಲಿ ಆ ಹುಡುಗನ ಸ್ವಭಾವವು ಒಳ್ಳೇದಾಗಿತ್ತು; ಅಂದರೆ ಅವನು ಕೆಟ್ಟ ಮಾತುಗಳನ್ನಾಡುತ್ತಿದ್ದಿಲ್ಲ, ಕಳ್ಳತನ ಮಾಡುತ್ತಿದ್ದಿಲ್ಲ, ಮತ್ತು ಬಹಳ ಶಿಟ್ಟು ಮಾಡುವ ಗುಣವು ಅವನಿಗಿರಲಿಲ್ಲ; ಆದರೆ ಅವನು ಬಹಳ ಲೋಭಿಯಾಗಿದ್ದದರಿಂದ, ಅವನಿಗಿದ್ದ ಒಳ್ಳೇ ಗುಣಗಳೆಲ್ಲಾ ಲೋಭತ್ವದಿಂದ ಮರೆಯಾಗಿ ಹೋದವು. ಈ ಕೆಟ್ಟ ಗುಣವು ಅವನಿಗೆ ಇಲ್ಲದಿದ್ದರೆ, ಅವನು ಅನೇಕ ಸ್ನೇಹಿತರ ಸಂಗಡ ಸಂತೋ

ಷ ಪಡ ಬಹುದಾಗಿತ್ತು. ಅವನು ಮತ್ತೊಬ್ಬರಲ್ಲಿ ಯಾ ವ್ಯಾವ ಒಳ್ಳೇ ಸಾಮಾನುಗಳನ್ನು ನೋಡುವನೋ, ಅವು ತನಗೂ ಇರ ಬೇಕೆಂದು ಅಪೇಕ್ಷಿಸುವನು. ಮಿಠಾಯಿ ಇತ್ಯಾದಿ ತಿನ್ನುವ ವಸ್ತುಗಳು ಇದ್ದರೆ, ಅವನು ತನ್ನ ಜತೆಹುಡುಗರಿಗೆ ಒಂದಿಷ್ಟು ಆದರೂ ಕೊಡಲೊಲ್ಲನು. ಅಂಥಾದ್ದನ್ನು ತಿನ್ನುವ ಸಮಯದಲ್ಲಿ ಯಾರೂ ನೋಡದ ಸ್ಥಳದಲ್ಲಿ ಒಬ್ಬನೇ ಕೂತು ಎಲ್ಲಾ ತಿಂದು ಬರುವನು.

ಹೀಗೆಯೇ ಲೋಭಿ ಜನರ ಮನಸ್ಸು; ಅವರಿಗೆ ಎಷ್ಟು ಇದ್ದರೂ ಸಾಲದು, ಇನ್ನೂ ಹೆಚ್ಚು ಹೆಚ್ಚು ಬೇಕೆಂಬುವದೇ ಅವರ ಆಶೆ. ಆದರೆ ಅವರಿಗೆ ಲೋಭತ್ವದಿಂದ ನಷ್ಟವೇ ಪ್ರಾಪ್ತಿ ಆಗುತ್ತದೆ ಹೊರ್ತು ಲಾಭವಿಲ್ಲ. ಇಂಥಾ ಸಂಗತಿಯು ಆ ವರ್ತಕನ ಮಗನಿಗೆ ಸಂಭವಿಸಿತು. ಅವನ ತಂದೆಯು, ಹುಡುಗನ ದುಷ್ಟ ಗುಣವು ಹೋಗ ಬೇಕೆಂದು, ಒಂದು ಯುಕ್ತಿ ಮಾಡಿದನು; ಹ್ಯಾಗಂದರೆ, ಹುಡುಗನು ಮಿಠಾಯಿ ತಿನ್ನುವ ಸಮಯದಲ್ಲಿ ಅವನ ಜತೆಹುಡುಗರನ್ನು ಅವನ ಎದುರಾಗಿ ಕುಂಡ್ರಿಸಿ, ಅವರಿಗೆ ಎರಡಷ್ಟು ಪಾಲು ಕೊಡುವನು. ಅದನ್ನು ಕಂಡು, ಹುಡುಗನು ಅಂದಿನಿಂದ ಅಡಗಿ ಕೊಂಡು ತಿನ್ನುವದನ್ನು ಬಿಟ್ಟನು; ಆದರೆ ಒಳ್ಳೇ ಮಿಠಾಯಿ ಅಥವಾ

ತಿನ್ನುವ ಬೇರೆ ಚಲೋ ಪದಾರ್ಥ ಕಂಡರೆ, ಅದು ತಾನೊಬ್ಬನೇ ತಿನ್ನ ಬೇಕೆಂಬ ಇಛ್ಛೆ ಅವನಲ್ಲಿ ಇನ್ನೂ ಪ್ರಬಲವಾಗಿತ್ತು. ಹ್ಯಾಗೆ ಪಕ್ಷಿಯು ತನ್ನ ಮರಿಗಳ ಮೇಲೆ ರೆಕ್ಕೆಗಳನ್ನು ಬಿಡಿಸಿ ಕೊಂಡು, ಅವುಗಳ ಮೇಲೆ ದೃಷ್ಟಿ ಇಡುವದೋ, ಅದೇ ಓಪಾದಿ ಆ ಹುಡುಗನು ಬೇರೆಯವರ ಕೈಯಲ್ಲಿದ್ದ ಮಿಠಾಯಿಯನ್ನು ನೋಡುತ್ತಾ ಇರುವನು. ತಂದೆಯು, ಮಗನು ಈ ಲೋಭದ ಕೆಟ್ಟ ಗುಣದ ದೆಶೆಯಿಂದ ಕೆಡುತ್ತಾನೆಂದು, ಕಂಡು, ಭಹಳ ವ್ಯಸನ ಪಟ್ಟು, ಆ ದುರ್ಗುಣವು ಅವನನ್ನು ಬಿಟ್ಟು ಹೋಗುವ ಹಾಗೆ ಮನೆಗೆ ಮಿಠಾಯಿ ತರುವದನ್ನು ಬಿಟ್ಟು ಬಿಟ್ಟನು.

ಆ ಹುಡುಗನ ಈ ಪ್ರಕಾರದ ಕೃಪಣ ಗುಣವನ್ನು ನೋಡಿ, ಅವನ ಜತೆಹುಡುಗರು ಸಹ ಅವನ ಸಹವಾಸ ಬಿಟ್ಟು, ಅವನ ಸಂಗಡ ಆಡದೆಯೂ ಮಾತಾಡದೆಯೂ ಇದ್ದರು. ಒಂದು ದಿನ ಆ ಹುಡುಗನ ಕೈಯಲ್ಲಿ ಒಂದು ಮಾವಿನ ಹಣ್ಣು ಇತ್ತು; ಆಗ್ಯೆ ಅವನ ಜತೆಗಾರರಲ್ಲಿ ಒಬ್ಬನು ಅವನ ಕೈಯನ್ನು ತಟ್ಟಿ, ಆ ಹಣ್ಣು ಕೆಳಗೆ ಬೀಳಿಸಿದನು. ಆಗ್ಯೆ ಅವನು ಬಹು ಆತುರದಿಂದ ಅದನ್ನು ಹೆಕ್ಕಿ ಕೊಂಡು, ತನ್ನ ಜತೆಗಾರನಿಗೆ—ನಿನ್ನನ್ನು ಬಿಡಲಿಕ್ಕಿಲ್ಲವೆಂದು, ಅವನ ಬೆನ್ನು ಹ

ತ್ತಿ ಕೊಂಡು ಓಡಿಸಿ ಹೋದನು. ಓಡುತ್ತಾ ಓಡುತ್ತಾ ದಾರಿಯಲ್ಲಿದ್ದ ಒಂದು ಕೆರೆಯೊಳಗೆ ಬಿದ್ದು ಮುಳುಗಿ ಸಾಯುವ ಗಂಡಾಂತರದಲ್ಲಿದ್ದನು; ಆ ಸಮಯದಲ್ಲಿ ತಾನು ಓಡಿಸಿಕೊಂಡು ಹೋದ ಜತೆಯವನಿಗೆ ಕೂಗಿ ಕರದು—ತನ್ನನ್ನು ಹೊರಗೆ ತೆಗಿ, ಸಾಯುತ್ತೇನೆ, ಅಂದನು. ಅವನು ಕೇಳಿ, ಕೇಳದವನಂತೆ ಹೋಗಿ ಬಿಟ್ಟನು. ಆಗ್ಯೆ ಕೆರೆ ಬಳಿಯ ಇದ್ದ ಬೇರೆ ಜತೆಗಾರರು ಅವನನ್ನು ಕಂಡು, ನೆಗಾಡಿ, ಹಾಸ್ಯ ಮಾಡಿ—ನೀನು ಯಾರಿಗೆ ಉಪಕಾರ ಮಾಡಿದ್ಧಿಯೋ, ಅವರನ್ನು ಸಹಾಯಕ್ಕೆ ಕರಿ; ಅವರು ಬಂದು ನಿನ್ನನ್ನು ತೆಗಿಯುವರು, ಅಂದರು. ಅವನು ತನ್ನ ಆಟದ ಗೆಳೆಯರಲ್ಲಿ ಒಬ್ಬನಿಗಾದರೂ ಏನೂ ಉಪಕಾರವಾಗಲಿ ದಯವಾಗಲಿ ಎಂದೂ ತೋರಿಸದೆ ಇದ್ದದರಿಂದ, ಅವರು ಅವನಿಗೆ ಸಹಾಯ ಮಾಡಲಿಕ್ಕೆ ಮನಸ್ಸಿಲ್ಲದವರಾಗಿದ್ದರು. ಕಡೆಯಲ್ಲಿ ಅವರಲ್ಲಿ ಒಬ್ಬನು, ಅವನು ಮುಳುಗಿ ಸಾಯುವದನ್ನು ನೋಡಲಾರದೆ, ಅವನ ಮೇಲೆ ಕನಿಕರ ಪಟ್ಟು, ಅವನ ಬಳಿಗೆ ಬಂದು, ಅವನ ಕೈ ಹಿಡಿದು, ಅವನನ್ನು ಮೇಲಕ್ಕೆ ತೆಗದು ಹಾಕಿದನು. ಅವನು ಮೇಲೆ ಬಂದ ತರುವಾಯ ತನ್ನನ್ನು ಕೈಕೊಟ್ಟು ಮೇಲೆ ಹಾಕಿದ ಹುಡುಗನ ಉಪಕಾರವನ್ನು ನೆನಸಿದ್ದು ಕೇಳಿದರೆ, ಆಶ್ಚ

ರ್ಯವಾಗುವದು. ಅದು ಹ್ಯಾಗೆಂದರೆ: ಅವನು ತನ್ನ ಕೈಯಲ್ಲಿ ಹಿಡಕೊಂಡಿದ್ದ ಮಾವಿನ ಹಣ್ಣನ್ನು ಕೊಯಿದು, ಅದರ ನಾಲ್ಕನೇ ಭಾಗವನ್ನು ತನಗೆ ದಯ ತೋರಿಸಿದ ಹುಡುಗನಿಗೆ ಕೊಟ್ಟನು. ಅವನು ಆ ತುಂಡನ್ನು ತನ್ನ ಗೆಳೆಯರಿಗೆ ತೋರಿಸಿ, ಬಿಸಾಡಿ ಬಿಟ್ಟನು; ಆದದರಿಂದ ಅವನ ಆಟದ ಗೆಳೆಯರೆಲ್ಲರೂ ಕೂಡಿ, ಆ ಲೋಭವುಳ್ಳ ಹುಡುಗನು ಮನೆಗೆ ಶೇರುವ ಪರ್ಯಂತರ, ಅವನ ಹಿಂದೆ ಹತ್ತಿ, ಪಿಯೋ, ಪಿಯೋ ಎಂದು ಕೈತಟ್ಟಿ ಕೂಗಿದರು. ಹೀಗೆ ಆ ಹುಡುಗರು ಹಾಸ್ಯ ಮಾಡಿದದರಿಂದ, ಅವನಿಗೆ ದುಃಖವೂ ನಾಚಿಗೆಯೂ ಉಂಟಾಯಿತು.

ಅಂದಿನಿಂದ ಆ ಹುಡುಗನು ತನ್ನ ನಡತೆಯ ವಿಷಯದಲ್ಲಿ ಬಹಳವಾಗಿ ಚಿಂತೆ ಮಾಡಿ, ದುಃಖ ಪಟ್ಟು, ಕೆಲವು ದಿವಸಗಳ ವರೆಗೆ ತಂದೆಗೆ ಮೋರೆಯನ್ನು ತೋರಿಸದೆ, ತನ್ನ ಕೋಣೆಯೊಳಗೆಯೇ ಇದ್ದು, ತನ್ನ ವಿಷಯವಾಗಿ ವಿಚಾರ ಮಾಡಲಾರಂಭಿಸಿದನು. ಹ್ಯಾಗೆಂದರೆ—ನಾನು ಯಾರಿಗೂ ಏನೂ ಉಪಕಾರ ಮಾಡದಿದ್ದರೂ, ಆ ಹುಡುಗನು ನನ್ನ ಹಿಂದೆಯೇ ಓಡಿ ಬಂದು, ಕೈ ಕೊಟ್ಟು ನನ್ನನ್ನು ಮೇಲೆ ಎತ್ತಿಕೊಂಡು ಮರಣದಿಂದ ರಕ್ಷಿಸಿದ ಕರುಣ ಎಂಥಾದ್ದು! ನಾ

ನು ಅವನಿಗೆ ಕೊಟ್ಟ ಮಾವಿನ ಹಣ್ಣಿನ ತುಂಡನ್ನು ಲಕ್ಷ್ಯ ಮಾಡದೆ ಬಿಸಾಡಿ ಬಿಟ್ಟ ಕಾರಣವೇನು? ಅವನಿಗೆ ಬಹು ಜನ ಸ್ನೇಹಿತರಿದ್ದಾರೆ; ನನಗೊಬ್ಬನಾದರೂ ಇಲ್ಲದಿರುವದಕ್ಕೆ ಹೇತುವೆ ಏನು? ಎಂಬ ಮುಂತಾದ ವಿಚಾರ ಮಾಡಿ, ಅವನು ತನ್ನ ನಡತೆಗೂ ಆಟದ ಗೆಳೆಯರ ನಡತೆಗೂ ಇರುವ ವ್ಯತ್ಯಾಸವನ್ನು ತೂಗಿ ನೋಡಿ, ಸ್ನೇಹಿತರನ್ನು ಸಂಪಾದಿಸಿ ಕೊಳ್ಳುವ ಕಾರಣವನ್ನು ತಿಳು ಕೊಂಡು, ಹೇಳಿದ್ದು—ನನ್ನನ್ನು ಕೆರೆಯೊಳಗಿಂದ ಹೊರಗೆ ತೆಗದ ಹುಡುಗನು ಯಾವಾಗಲು ಮತ್ತೊಬ್ಬನಿಗೆ ಉಪಕಾರ ಮಾಡುವ ರೂಢಿಯಿಂದ ಒಪ್ಪುತ್ತಿದ್ದಾನೆ. ಅವನಿಗೆ ಒಬ್ಬನು ಮಿಠಾಯಿಯಾಗಲಿ ಹಣ್ಣಾಗಲಿ ತಿನ್ನಲಿಕ್ಕೆ ಕೊಟ್ಟರೆ, ತಾನು ತಿನ್ನುವದಕ್ಕಿಂತ ಮತ್ತೊಬ್ಬರಿಗೆ ಕೊಡುವದು ಅವನಿಗೆ ಅಧಿಕ ಸವಿಯಾಗಿರುವದು. ಅವನಿಗೆ ಹಣ್ಣು ಶಿಕ್ಕಿದರೆ, ಅವನು ತನ್ನ ಆಟದ ಗೆಳೆಯರೆಲ್ಲರು ಅದರ ರುಚಿ ನೋಡ ಬೇಕೆಂದು ಅಪೇಕ್ಷಿಸುತ್ತಾನೆ.—ಹೀಗೆ ಅವನ ಒಳ್ಳೇ ಗುಣಕ್ಕಾಗಿ ಅವನಿಗೆ ಅನೇಕ ಸ್ನೇಹಿತರು ಇದ್ದಾರೆಂಬ ವಿವೇಕಕ್ಕೆ ಬಂದು, ಅವನ ಒಳ್ಳೇ ಗುಣದ ಪ್ರಕಾರ ತಾನೂ ನಡಿಯ ಬೇಕೆಂಬ ನಿರ್ಧಾರ ಮಾಡಿ ಕೊಂಡು, ಮರು ದಿವಸ ಕೆಲವು ಹಣ್ಣುಗಳನ್ನು ತೆಗದು ಕೊಂಡು ಹೋ

ಗಿ, ದಾರಿಯಲ್ಲಿ ಶಿಕ್ಕಿದ ಆಟದ ಗೆಳೆಯರಿಗೆ ಕೊಟ್ಟನು. ಆದರೂ ಹಣ್ಣುಗಳನ್ನು ತಾನು ಸಹ ತಿನ್ನದೆ ಇರುವದು ಅವನಿಂದ ತಾಳ ಕೂಡದೆ, ಕೆಲವು ಹಣ್ಣುಗಳನ್ನು ತನ್ನ ಎಲವಸ್ತ್ರದಲ್ಲಿಟ್ಟು ಕೊಂಡು, ಒಂದು ಕಡೆಗೆ ಹೋಗಿ ತಿಂದನು. ಹೀಗಿದ್ದರೂ ಅವನ ಲೋಭವು ಹೋಗಲಿಲ್ಲವೆಂದು ಇದರಿಂದ ಸ್ಪಷ್ಟವಾಗಿ ಕಾಣುತ್ತದೆ. ಆದಾಗ್ಯೂ ಅವನ ಲೋಭತ್ವದ ಗುಣ ಸ್ವಲ್ಪವಾದರೂ ಕಡಿಮೆಯಾಯಿತೆಂದು ನೋಡಿ, ಅವನ ಗೆಳೆಯರು ಅವನಿಗೆ ಏನಾದರೂ ಉಪಕಾರ ತೋರಿಸುತ್ತಾ ಇದ್ದರು. ಆದದರಿಂದ ಅವನಿಗೆ ಮನಸ್ಸಿನಲ್ಲಿ ಸಮಾಧಾನ ಬಂದು, ಅವರ ಜತೆಯಲ್ಲಿರುವದು ಅವನಿಗೆ ಸಂತೋಷವಾಗಿತ್ತು. ಅವನು ಅವರ ಸಂಗಡ ಆಡುವಾಗ ತನ್ನ ಕೈಯಲ್ಲಿ ಏನಾದರೂ ತಿನ್ನುವ ಪದಾರ್ಥವಿದ್ದರೆ, ಅವರಿಗೂ ಕೊಡುತ್ತಿದ್ದನು. ಈ ಪ್ರಕಾರ ಅವರ ಸಂಗಡ ಆಡಿದ ಮೇಲೆ ಅವನು ಸುಖಿಯಾಗಿ ಮನೆಗೆ ಬರುವನು.

ತರುವಾಯ ಆ ಹುಡುಗನ ಗುಣವು ಬರಬರ ಬೇರೆ ಆಯಿತು. ಅವನ ತಿಂಡಿಬಾಕತನವು ಕಡಿಮೆಯಾಗಿ ಬಂತು. ಅವನು ತಿನ್ನುವದಕ್ಕೆ ಹಣ್ಣುಗಳು ತಂದರೆ, ತನಗಾಗಿ ಪ್ರತ್ಯೇಕ ಎಲವಸ್ತ್ರದಲ್ಲಿ ಅಡಗಿಸಿಡದೆ, ಎಲ್ಲವನ್ನು ಸಮನಾಗಿ ತನ

ಗೂ ತನ್ನ ಜತೆಗಾರರಿಗೂ ಪಾಲು ಮಾಡುತ್ತಿದ್ದನು. ಹೀಗೆ ಮಾಡುತ್ತಾ ಅವನ ಗುಣ ಬೇರೆ ಆದದರಿಂದ, ಅವನ ಜತೆ ಹುಡುಗರು ಅವನಿಗೆ ಮೆಚ್ಚಿದರು. ಸ್ವಲ್ಪ ಕಾಲದ ಮೇಲೆ ಅವನ ಹೊಟ್ಟೆಬಾಕತನವು ಪೂರ್ಣವಾಗಿ ಹೋಯಿತು; ಮತ್ತು ಅವನ ಗೆಳೆಯರು ಅವನನ್ನು ಹೆಚ್ಚಾಗಿ ಪ್ರೀತಿ ಮಾಡಿದರು; ಮತ್ತು ಅವನು ಕೆಲವು ದಿವಸ ಕಾಣದೆ ಹೋದರೆ, ಆ ಹುಡುಗರು ಅವನನ್ನು ಹುಡುಕುತ್ತಾ ಬಂದು, ಅವನನ್ನ ಕಾಣಿಸಿ ಕೊಂಡು, ಅವನಿಗೆ ಹಿತಕರವಾಗುವ ಹಾಗೆ ನಡ ಕೊಂಡು, ಅವನನ್ನು ಸಂತೋಷ ಪಡಿಸುವರು. ಆ ಹುಡುಗನ ಲೋಭತ್ವದ ಗುಣ ಹೋದ ಮೇಲೆ, ಅವನಿಗೆ ಅನೇಕ ಸ್ನೇಹಿತರಾಗಿ, ಅವನು ಮುಂಚೆಗಿಂತ ಹೆಚ್ಚು ಸುಖಿಯಾಗಿ, ಅಧಿಕವಾದ ಸಂತೋಷವನ್ನು ಅನುಭವಿಸಿದನು.

ಸ್ನೇಹಿತರನ್ನು ಸಂಪಾದಿಸ ಬೇಕಾದರೆ, ಸ್ನೇಹವನ್ನು ತೋರಿಸ ಬೇಕು. ಮತ್ತೊಬ್ಬರು ತನಗೆ ಉಪಕಾರ ಮಾಡ ಬೇಕೆಂದು ಅಪೇಕ್ಷಿಸಿದರೆ, ತಾನೂ ಮತ್ತೊಬ್ಬರಿಗೆ ಉಪಕಾರ ಮಾಡ ಬೇಕು. ದೇವರ ವಾಕ್ಯದಲ್ಲಿ ಹೇಳುವದೇನೆಂದರೆ— "ಮತ್ತೊಬ್ಬರು ನಿಮಗೆ ಏನು ಮಾಡ ಬೇಕೆಂದು ಇಚ್ಛೈಸುತ್ತೀರೋ, ಅದನ್ನೆ ನೀವು ಅವರಿಗೂ ಮಾಡಿರಿ." ಹುಡುಗರೇ,

ಹೀಗೆ ಮಾಡಿದವರಿಗೆ ಸುಖ ಉಂಟಾಗುವದು. ಲೋಭಿಯಾದವನಿಗೆ ಎಂದಿಗೂ ಸುಖವಿಲ್ಲ, ಮನಃತೃಪ್ತಿ ಇಲ್ಲ; ಯಾಕಂದರೆ, ಅವನು ಹೆಚ್ಚು ಹೆಚ್ಚು ಕೂಡಿಸಲಿಕ್ಕೆ ಇಚ್ಛೈಸುತ್ತಾನೆ.

ಲೋಭಿಯಾಗಿರ ಬಾರದೆಂಬುವದು ದೇವರ ಆಜ್ಞೆಯಾಗಿದೆ. ಆತನ ಆಜ್ಞೆ ಮಿಾರಿ ನಡದರೆ, ಪಾಪವೇ. ಪಾಪ ಬಿಡದ ಹೊರ್ತು ಸುಖವಿಲ್ಲ. ಆ ಹುಡುಗನು ಹೊಟ್ಟೆಬಾಕನಾದ ಲೋಭಿಯಾಗಿದ್ದದರಿಂದ, ಅವನಿಗೆ ಸುಖವಿರಲಿಲ್ಲ; ಮತ್ತು ಆ ಕೆಟ್ಟ ಗುಣ ಹೋದ ಮೇಲೆ ಅವನಿಗೆ ಸುಖವಾಯಿತು. ನನ್ನ ಪ್ರಿಯ ಹುಡುಗರೇ, ನಿಮಗೆ ಸುಖವೂ ಸಮಾಧಾನವೂ ಪ್ರಾಪ್ತಿಯಾಗ ಬೇಕಾದರೆ, ಲೋಭ ಇತ್ಯಾದಿ ಕೆಟ್ಟ ಗುಣಗಳನ್ನು ಬಿಟ್ಟು, ಯೇಸು ಕ್ರಿಸ್ತನ ಆಜ್ಞೆಗಳನ್ನು ಹಿಂಬಾಲಿಸಿರಿ; ಮತ್ತು ಯಾರಾದರೂ ಸಂಕಷ್ಟದಲ್ಲಿ ಬಿದ್ದಾಗ, ಆ ಲೋಭಿ ಹುಡುಗನ ಗೆಳೆಯರಂತೆ, ಕೆರೆಯ ಸುತ್ತಲು ಹಾಸ್ಯ ಮಾಡಿ ಕುಣಿದಾಡಿದ ಹಾಗೆ ಮಾಡದೆ, ಶೀಘ್ರವಾಗಿ ನಿಮ್ಮಿಂದ ಆಗುವಷ್ಟು ಸಹಾಯವನ್ನು ಮಾಡಿರಿ. ಒಬ್ಬನು ಮರಣದ ಗಂಡಾಂತರದಲ್ಲಿರುವಾಗ ಸಹಾಯ ಮಾಡದೆ ಹಾಸ್ಯ ಮಾಡುವದು ಬಹಳ ದುಷ್ಟತನವಾಗಿದೆ; ಅದಕ್ಕೆ ದೇವರು ಮೆಚ್ಚನು; ಅಂಥಾ ಪಾಪಕ್ಕೆ ಅವರಿಗೆ ತಕ್ಕ ಫಲ ಶಿಕ್ಕು

ವದು. ನಿಮ್ಮ ಗೆಳೆಯರು ಕೆಟ್ಟವರಾಗಿದ್ದರೂ ನೀವು ಅವರಿಗೆ ಒಳ್ಳೇದನ್ನು ಮಾಡಿರಿ. ಅದೇ ದೇವರಿಗೆ ಸಂತೋಷವು.

---

## ೪. ಇಲಿಬೋನು.

ಒಂದು ದಿವಸ ಫ್ರಿಲಾಂದ ಎಂಬ ಒಬ್ಬ ಒಕ್ಕಲಿಗನು ತನ್ನ ಮನೆಯಲ್ಲಿ ಇಲಿಬೋನು ಇಟ್ಟು, ತನ್ನ ಚಿಕ್ಕ ಮಗನಾದ ರೊಬರ್ತನಿಗೆ, ಬೋನಿನೊಳಗೆ ಇಲಿ ಬಿದ್ದರೆ ತನಗೆ ಹೇಳ ಬೇಕೆಂದು, ಆಜ್ಞಾಪಿಸಿದನು. ಆದದರಿಂದ ರೊಬರ್ತನು ಅದರ ವಿಷಯದಲ್ಲಿ ಎಚ್ಚರಿಗೆಯಾಗಿದ್ದನು. ಸ್ವಲ್ಪ ಹೊತ್ತಿನ ಮೇಲೆ ರೊಬರ್ತನು ಇಲಿಯ ಕೂಗನ್ನು ಕೇಳಿ, ತಂದೆಯ ಬಳಿಗೆ ಓಡಿ ಬಂದನು.

ರೊಬರ್ತನು. ಅಪ್ಪಾ, ಅಪ್ಪಾ! ಬೋನಿನೊಳಗೆ ಒಂದು ಇಲಿ ಬಿದ್ದದೆ ಎಂದು ನನಗೆ ನಿಶ್ಚಯ ಕಾಣುತ್ತದೆ; ಏನಂದರೆ ನಾನು ಇಲಿ ಕಿಚಿಕಿಚಿ ಎಂದು ಒದರುವದನ್ನು ಕೇಳಿದೆನು, ತ್ವರೆಯಾಗಿ ಬಾ—ಎಂದು ಕರದನು.

ಫ್ರಿಲಾಂದನು. ಹಾಗಾದರೆ ರೊಬರ್ತನೇ, ನಿಲ್ಲು, ಆ ಬೋನು ಕೆಳಗೆ ಇಳಿಸ ಬೇಕು. ಹಾಹಾ! ಶಿರೆಯಲ್ಲಿ ಬಿದ್ದ

ಚಿಕ್ಕ ಶಿರೆಯವನನ್ನು ನೋಡು! ಅವನು ಹ್ಯಾಗೆ ಶ್ರಮೆ ಪಡುತ್ತಾನೆ; ಅವನ ಶ್ರಮೆಯನ್ನು ನಾನು ಕೂಡಲೇ ತೀರಿಸುವೆನು. ಏನಂದರೆ ನಾವು ಇಲಿಗಳನ್ನು ಹಿಡಿಯುವದು ಅವಶ್ಯವಾಗಿದ್ದರೂ ಅವುಗಳಿಗೆ ವ್ಯರ್ಥವಾದ ಶ್ರಮೆ ಕೊಡುವದು ಕ್ರೂರವಾಗಿದೆ.

ರೊಬ. ಅಯ್ಯೋ, ಬಡ ಜೀವಿ! ಎಷ್ಟು ಮರುಳುತನ ಹಿಡಿಯಿತು ಅದಕ್ಕೆ! ನಮ್ಮ ಹಾಗೆ ಅದಕ್ಕೆ ಬುದ್ಧಿ ಇದ್ದರೆ, ಅದು ಬೋನಿನೊಳಗೆ ಬೀಳುವ ಹಾಗೆ ಅಷ್ಟು ಮರುಳಾಗಿರುತ್ತಿದ್ದಿಲ್ಲ.

ಫ್ರಿಲಾ. ಹಾಹಾ, ರೊಬರ್ತನೇ! ಅದೇನೋ ನಾನರಿಯೆ; ಆದರೆ ಚಿಕ್ಕ ಹುಡುಗರು ಸಹಾ ಶಿಕ್ಕಿ ಬೀಳುವ ಬೋನುಗಳು ಅವೆ; ಮತ್ತು ಅವುಗಳಲ್ಲಿ ಅನೇಕ ಹುಡುಗರು ಬೀಳುವಷ್ಟು ಹುಚ್ಚರಾಗಿದ್ಧಾರೆಂದು ಕೇಳಿದ್ಧೇನೆ.

ರೊಬ. ಏನು! ಚಿಕ್ಕ ಹುಡುಗರು ಬೀಳುವ ಬೋನುಗಳುಂಟೋ? ಅದು ನಾನು ಇನ್ನೂ ಕೇಳಲಿಲ್ಲ. ಅಂಥಾ ಬೋನಿನೊಳಗೆ ನಾನು ಒಂದು ಗಿಣ್ಣದ ತುಂಡಿಗಾಗಿ ಎಂದಿಗೂ ಶಿಕ್ಕಿ ಬೀಳೆನು.

ಫ್ರಿಲಾ. ಒಂದು ವೇಳೆ ಸುಟ್ಟ ಗಿಣ್ಣದ ತುಂಡಿಗಾಗಿ

ಬೀಳಲೊಲ್ಲೆ, ಖರೆ. ಇಲಿ ಹಿಡಿಯುವದಕ್ಕೆ ಬೋನಿನೊಳಗೆ ಗಿಣ್ಣದ ತುಂಡಿಡುತ್ತಾರೆ, ಮತ್ತು ಪಕ್ಷಿಯನ್ನು ಹಿಡಿಯುವದಕ್ಕೆ ರೊಟ್ಟೀ ತುಂಡು ಇಡುತ್ತಾರೆ. ಅವು ಈ ಆಹಾರಕ್ಕೆ ಮರುಳಾಗಿ ಬೋನಿನೊಳಗೆ ಶಿಕ್ಕಿ ಬೀಳುತ್ತಾವೆ. ಆದರೆ ಚಿಕ್ಕ ಹುಡುಗರನ್ನು ಮರುಳು ಗೊಳಿಸುವ ಆಹಾರಗಳು ಇವು ಅಲ್ಲ; ಅವು ಬೇರೆಯಾಗಿವೆ.

ರೊಬ. ಹಾಗಾದರೆ ಚಿಕ್ಕ ಹುಡುಗರಿಗೋಸ್ಕರ ಎಂಥಾ ಬೋನುಗಳು ಇಡುತ್ತಾರೆ? ಅವು ದೊಡ್ಡ ಬೋನುಗಳಾಗಿರ ಬೇಕು. ನಾನು ಅಂಥಾ ಬೋನುಗಳಲ್ಲಿ ಒಳ್ಳೇ ಸವಿಯಾದ ಹೋಳಿಗೆಗಳನ್ನಿಟ್ಟರೂ ಅವುಗಳೊಳಗೆ ಹೊಕ್ಕೆನು.

ಫ್ರಿಲಾ. ಚಿಕ್ಕ ಹುಡುಗರು ಮಾತ್ರವಲ್ಲ, ಗಂಡಸರೂ ಹೆಂಗಸರೂ ಶಿಕ್ಕಿ ಬೀಳುವ ಬೋನುಗಳುಂಟೆಂದು ಕೇಳಿದರೆ, ನೀನು ಆಶ್ಚರ್ಯ ಪಡುವಿ.

ರೊಬ. ಏನು ಅಪ್ಪಾ! ಗಂಡಸರೂ ಹೆಂಗಸರೂ ಸಹಾ ಬೋನಿನೊಳಗೆ ಶಿಕ್ಕಿ ಬೀಳುವದುಂಟೋ? ಅಂಥಾ ದೊಡ್ಡ ಪ್ರಾಯದವರು ಬೋನಿನೊಳಗೆ ಶಿಕ್ಕಿ ಬೀಳುವಷ್ಟು ಹುಚ್ಚರಾಗಿದ್ಧಾರೆಂಬುವದು ನಾನು ನಂಬ ಕೂಡದು.

ಫ್ರಿಲಾ. ರೊಬರ್ತನೇ, ನೀನು ತಪ್ಪಾಗಿ ಗ್ರಹಿಸುತ್ತೀ. ಒಂ

ದು ಇಡೀ ಸಂಸಾರದವರು ಬೋನಿನೊಳಗೆ ಶಿಕ್ಕಿ ಬಿದ್ದದ್ದು ಬಲ್ಲೆನು.

ರೊಬ. ಒಂದು ಇಡೀ ಮನೆತನದವರು ಬೋನಿನೊಳಗೆ ಶಿಕ್ಕಿ ಬಿದ್ದರು! ಹಾಗಾದರೆ ಅಪ್ಪಾ, ನೀನು ಹೇಳುವದು ಈಗ ಗ್ರಹಿಸಿ ಕೊಂಡೆ. ನೀನು ಹೇಳುವದು ನರಬಲೆಯಾಗಿರ ಬೇಕು. ಆ ಇಡೀ ಸಂಸಾರದವರು ಕೆಟ್ಟವರು. ಅವರು ಒಬ್ಬ ಧೊರೇ ಮನೆಗೆ ಕದಿಯ ಹೋಗಿ, ಅಲ್ಲಿ ನೆಲದೊಳಗಿಟ್ಟ ಬೋನು ಕಾಣದೆ ಅದರೊಳಗೆ ಶಿಕ್ಕಿ ಬಿದ್ದಿರ ಬೇಕು. ಅವರು ಇಲಿಯ ಹಾಗೆ ಹುಚ್ಚರಾಗಿ ಬೋನಿನೊಳಗೆ ಬಿದ್ದರೆಂದು ಹೇಳುತ್ತಿ, ಅಲ್ಲಪ್ಪಾ?

ಫಿಲಾ. ನರಬಲೆಗಳ ವಿಷಯದಲ್ಲಿ ನೆನಸುವದಕ್ಕೆ ನೀನು ಘಟ್ಟಿಗನಾಗಿದ್ಧೀ; ಆದರೆ ಅವರು ನೀನು ನೆನಸುವ ತರದವರು ಅಲ್ಲ, ನಾನು ಹೇಳಿದ ಸಂಸಾರದವರು ಯಾರಂದರೆ: ಒಬ್ಬ ಧೊರೆಸಾನಿಯು, ಒಬ್ಬ ಧೊರೆಯು, ಅವರ ಚಿಕ್ಕ ಹುಡುಗನು, ಅವರ ಸೇವಕನು, ಮತ್ತು ಒಬ್ಬ ಸೇವಕಳು. ಅವರು ಯಾರಲ್ಲಿಯಾದರೂ ಕಳ್ಳತನ ಮಾಡಲಿಲ್ಲ; ಆದಾಗ್ಯೂ ಅವರು ಬಲೆಗಳೊಳಗೆ ಶಿಕ್ಕಿ ಬಿದ್ದರು.

ರೊಬ. ಅಪ್ಪಾ, ಅವರ ಸಂಗತಿಗಳನ್ನು ನನಗೆ ಹೇಳ

ಬೇಕೆಂದು ನಾನು ಬಹಳವಾಗಿ ಅಪೇಕ್ಷಿಸುತ್ತೇನೆ. ಬಲೆಗಳಲ್ಲಿ ಒಂದು ಇಡೀ ಸಂಸಾರದವರು ಬೀಳುವದು ಹ್ಯಾಗೆಂದು ನಾನು ಗ್ರಹಿಸಲಾರೆನು.

ಫ್ರಿಲಾ. ನಾನು ಅವರ ವೃತ್ತಾಂತವನ್ನು ಹೇಳಿ, ಎಲ್ಲಾ ಕಡೆಯಲ್ಲಿ ಬಲೆಗಳು ಒಡ್ಡಿ ಅವೆ ಎಂದು ನಿನ್ನನ್ನು ಎಚ್ಚರಿಸಿದರೆ, ನಾನು ಹೇಳಿದ್ದನ್ನು ಜ್ಞಾಪಕ ಮಾಡಿ, ಅವುಗಳಲ್ಲಿ ಬೀಳದ ಹಾಗೆ ನೀನು ಜಾಗ್ರತೆಯಾಗಿ ನಡ ಕೊಳ್ಳುವಿ ಎಂದು ಕೋರುತ್ತೇನೆ.

ರೊಬ. ಇಲ್ಲಪ್ಪಾ, ನಾನು ಅಂಥಾ ಬಲೆಯೊಳಗೆ ಬೀಳುವೆನೆಂದು ಭಯ ಪಡುವದಿಲ್ಲ. ಅದರಲ್ಲಿ ಎಂಥಾ ಸವಿ ಕಜ್ಜಾಯ ಹಾಕಿಟ್ಟರೂ, ನಾನು ಬಹು ಜಾಗ್ರತೆಯಿಂದ ತಪ್ಪಿಸಿ ಕೊಳ್ಳುವೆನು. ನನ್ನನ್ನು ಹಿಡಿಯುವವರು ಯುಕ್ತಿವಂತರಾಗಿರ ಬೇಕು. ಆದರೆ ಆ ಕಥೆಯನ್ನು ಪೂರ್ಣವಾಗಿ ಕೇಳುವದಕ್ಕೆ ನನಗೆ ಬಹಳ ಮನಸ್ಸುಂಟು.

ಫ್ರಿಲಾ. ಹಾಗಾದರೆ ಹೇಳುತ್ತೇನೆ: ಹೆರಿ ಎಂಬ ಅವರ ಚಿಕ್ಕ ಮಗನು ಮೊದಲು ಬಲೆಯೊಳಗೆ ಶಿಕ್ಕಿ ಬಿದ್ದನು; ಹ್ಯಾಗೆಂದರೆ: ಒಂದು ಸಾಯಂಕಾಲದಲ್ಲಿ ಹೆರಿಯು ತನ್ನ ಮನೆಯ ಸಮೀಪವಿರುವ ಒಂದು ಓಣಿಯಲ್ಲಿ ಆಡುತ್ತಾ ಇದ್ದನು.

ಆ ಸಮಯದಲ್ಲಿ ಒಂದು ಕತ್ತೆಯ ಮೇಲೆ ಭಾರ ಹೊರಿಸಿ ಕೊಂಡು, ಇಬ್ಬರು ಗಿಬಸಿ ಹೆಂಗಸರು ಬಂದರು. ಅವರಲ್ಲಿ ಒಬ್ಬಳು ಕೈಯಲ್ಲಿ ಒಂದು ಭಂಗಾರದ ವರಕು ಕೊಟ್ಟ ಮಿ ಠಾಯಿಯ ತುಂಡು ಹಿಡ ಕೊಂಡು, ಆ ಹುಡುಗನಿಗೆ ತೋರಿ ಸಿ—ನೀನು ನಮ್ಮ ಸಂಗಡ ಈ ಓಣೀ ಅಂತ್ಯದ ವರೆಗೆ ಬಂದರೆ, ಇದನ್ನು ಕೊಟ್ಟೇನು, ಅಂದಳು. ಆಗ್ಯೆ ಹೆರಿಯು ಸ್ವಲ್ಪ ಅಂಜಿ ಓಡಿ ಹೋಗ ಮನಸ್ಸು ಮಾಡಿದನು; ಆದರೆ ಆ ಮಿಠಾಯಿ ಯ ಮೇಲಿದ್ದ ಮಿಂಚುವ ಭಂಗಾರದ ವರಕು ಅವನ ಕಣ್ಣಿ ಗೆ ಮರೆಯಾಗಲಿಲ್ಲ; ಅದೇ ಅವನಿಗೆ ದೊಡ್ಡ ಶೋಧನೆ ಆಗಿ ತ್ತು. ಆದದರಿಂದ, ಗಾಳಕ್ಕೆ ಶಿಕ್ಕಿಸಿರುವ ಹುಳದ ಮೇಲೆ ಆ ಶೆ ಇಟ್ಟ ಮೀನಿನ ಹಾಗೆ, ಅವನಿಗೆ ಆ ಮಿಠಾಯ ಮೇಲೆ ಇ ದ್ದ ಲೋಭವು ಆ ಗಿಬಸಿಯ ಬಲೆಯೊಳಗೆ ಬೀಳ ಮಾಡಿ ತು. ಆ ಯುಕ್ತಿಯುಳ್ಳ ಗಿಬಸಿ ಸ್ತ್ರೀಯರು ಹೆರಿಯನ್ನು ತೆಗದು ಕೊಂಡು ಹೋಗಿ ಬಿಟ್ಟರು. ಅವನ ತಂದೆ ತಾಯಿ ಗಳಿಗೆ ಅವನ ವರ್ತಮಾನವು ಬಹು ಕಾಲದ ವರೆಗೆ ಶಿಕ್ಕಲಿ ಲ್ಲ. ಹೀಗೆಯೇ ಗಿಬಸಿಯರು ಹುಡುಗರಿಗೆ ಬಲೆ ಒಡ್ಡುತ್ತಾ ರೆ; ಮತ್ತು ಚಿಕ್ಕ ಹುಡುಗರು ಇಲಿಯ ಹಾಗೆ ಅವರ ಬಲೆ ಯೊಳಗೆ ಬೀಳುತ್ತಾರೆ.

ರೊಬ. ಆ ಹುಡುಗನು ಬಹಳ ಹುಚ್ಚನೆಂದು ಕಾಣುತ್ತದೆ. ನಾನು ಅಂಥಾ ಹುಚ್ಚು ಹುಡುಗನ ವಿಷಯದಲ್ಲಿ ಹುಟ್ಟಿದಂದಿನಿಂದ ಕೇಳಲಿಲ್ಲ. ನಾನಾದರೆ, ಒಂದು ಬುಟ್ಟಿ ತುಂಬ ಮಿಠಾಯಿ ಕೊಡುತ್ತೇನೆಂದು ಹೇಳಿದರೂ, ಆ ಗಿಬಸಿ ಹೆಂಗಸರ ಸಂಗಡ ಹೋಗುತ್ತಿದ್ದಿಲ್ಲ. ಆದರೆ ಆ ಬೇರೆ ಜನರು ಹ್ಯಾಗೆ ಹಿಡಿಯಲ್ಪಟ್ಟರು? ಅವರು ಗಿಬಸಿಯರ ಸಂಗಡ ಮಿಠಾಯಿಗೋಸ್ಕರ ಹೋಗಲಿಲ್ಲವೆಂದು ಕಾಣುತ್ತದೆ.

ಫ್ರಿಲಾ. ಇಲ್ಲ, ಆ ಸೇವಕಳು ಒಂದು ಲಾಡಿಗೋಸ್ಕರ ಮರುಳು ಗೊಂಡು ಶಿಕ್ಕಿ ಬಿದ್ದಳು. ಅವಳು ಶೃಂಗಾರದ ಸೊಗಸಿನ ಪ್ರಿಯಳಾಗಿರುವದರಿಂದ, ಒಂದು ಅಂಗಡಿಯಲ್ಲಿ ತೂಗಿಸಿದ್ದ ನೀಲ ವರ್ಣದ ಲಾಡಿಯ ಮೇಲೆ ಬಹಳವಾಗಿ ಆಶೆ ಇಟ್ಟು, ಅದನ್ನು ಕೊಂಡು ಕೊಳ್ಳ ಯೋಗ್ಯತೆ ಇಲ್ಲದವಳಾದ ಕಾರಣ, ಅವಳ ಧೊರೆಸಾನಿಯು ಅವಳನ್ನು ಒಂದು ದಿನ ಕೆಲವು ಸಾಮಾನು ತೆಗದು ಕೊಳ್ಳ ಕಳುಹಿಸಿದಾಗ, ಅವಳು ಆ ನೀಲ ವರ್ಣದ ಲಾಡಿಯ ಮೇಲೆ ಇಟ್ಟ ತನ್ನ ಇಚ್ಛೆಯನ್ನು ಜಯಿಸ ಕೂಡದೆ, ತನ್ನ ಯಜಮಾನಳಿಗೆ ಮೋಸ ಮಾಡಿ, ಆ ಲಾಡಿಯನ್ನು ಕೊಂಡು ಕೊಂಡಳು. ಹೀಗಾಗಿ ಅವಳು ಮೋಸ ಕೃತ್ಯದ ಬಲೆಯೊಳಗೆ

ಶಿಕ್ಕಿ ಬಿದ್ದು, ತನ್ನ ಕೆಲಸವನ್ನೂ ತನ್ನ ಒಳ್ಳೇ ನಡತೆಯ ಹೆಸರನ್ನೂ ಕಳ ಕೊಂಡಳು.

ರೊಬ. ಅಯ್ಯೋ! ಅವಳು ಒಂದು ಲಾಡಿಯ ಸಲವಾಗಿ ತನ್ನ ಕೆಲಸವನ್ನೂ ಒಳ್ಳೇ ಹೆಸರನ್ನೂ ಕಳಕೊಳ್ಳುವ ಹಾಗೆ ಎಷ್ಟು ಮೂಢಳಾಗಿರ ಬೇಕು! ಅವಳು ಆ ಗಿಬಸಿಯ ರ ಸಂಗಡ ಹೋದ ಆ ಚಿಕ್ಕ ಹೆರಿಯ ಹಾಗೆಯೇ ಹುಚ್ಚಳಾಗಿದ್ದಳು.

ಫ್ರಿಲಾ. ಆ ಸೇವಕನು ಸಹಾ ಬಲೆಯೊಳಗೆ ಹ್ಯಾಗೆ ಶಿಕ್ಕಿ ಬಿದ್ದನಂದರೆ: ಒಂದು ದಿವಸ ಅವನು ಕೆಟ್ಟ ಜತೆಗಾರರ ಸಂಗಡ ಕೂಡಿ ಕೊಂಡು, ಒಂದು ಸಾರಾಯ ಅಂಗಡಿಗೆ ಹೋದಾಗ್ಯೆ, ಅಲ್ಲಿ ಸರ್ಜಂತನೆಂಬ ಒಬ್ಬ ಕೀಳ ತರದ ದಂಡಿನ ಉದ್ಯೋಗದವನು ಅವನಿಗೆ ಒಂದು ಪಾತ್ರ ಜಿನ್ ಎಂಬ ಸಾರಾಯ ಕುಡಿಯ ಕೊಟ್ಟನು. ಅವನಿಗೆ ಅಮಲು ಆದ ಮೇಲೆ ಆ ಸರ್ಜಂತನು ಅರಸನ ಹೆಸರಿನಲ್ಲಿ ಅರ್ಧ ರೂಪಾಯಿ ಅವನ ಕೈಯಲ್ಲಿಟ್ಟು, ಅವನು ಸೈನ್ಯದಲ್ಲಿ ಶಿಪಾಯಿಯಾಗಿರ ಬೇಕೆಂದು ಅವನನ್ನು ಪ್ರೇರೇಪಿಸಿ, ಅವನ ಹೆಸರನ್ನು ಲೆಖ್ಖದ ಪಟ್ಟಿಯಲ್ಲಿ ದಾಖಲು ಮಾಡಿದನು. ಆ ಬಡ ಮನುಷ್ಯನ ಲಾಹರಿ ಹೋದ ಮೇಲೆ, ತಾನು ಆ ಸರ್ಜಂತನ ಬ

ಲೆಯೊಳಗೆ ಶಿಕ್ಕಿ ಬಿದ್ದದಕ್ಕಾಗಿ ಬಹಳ ದುಃಖ ಪಟ್ಟನು. ಹೀಗೆ ಆ ಸೇವಕನು ಒಂದು ಪಾತ್ರೆ ಜಿನ್ ಎಂಬ ಸಾರಾಯಿಗಾಗಿ ಬಲೆಯಲ್ಲಿ ಶಿಕ್ಕಿ ಬಿದ್ದನು.

ರೊಬ. ಅಪ್ಪಾ, ನೀನು ಹೇಳಿದ್ದು ಸಮ. ಲೋಕದಲ್ಲಿ ನಾನು ನೆನಸಿದಕ್ಕಿಂತ ಹೆಚ್ಚು ಬಲೆಗಳು ಇರುತ್ತವೆಂದು, ಈಗ ನಾನು ತಿಳು ಕೊಳ್ಳುತ್ತೇನೆ. ಆದರೆ ಆ ಧೊರೆಯೂ ಧೊರೆಸಾನಿಯೂ ಹ್ಯಾಗೆ ಬಲೆಯೊಳಗೆ ಬಿದ್ದರೆಂಬುವದು ನನಗೆ ತಿಳಿಸಿರಿ.

ಫ್ರಿಲಾ. ಆ ಧೊರೆಸಾನಿಯು ಒಬ್ಬ ರತ್ನ ಮಾರುವವನ ಅಂಗಡಿಯಲ್ಲಿ ಒಂದು ಅಮೂಲ್ಯವಾದ ವಜ್ರದ ಉಂಗುರವನ್ನು ನೋಡಿ, ಅದನ್ನು ಹೊಂದಲಿಕ್ಕೆ ಬಹಳ ಆಶೆ ಮಾಡಿದಳು; ಆದರೆ ಅದು ಬಹಳ ಬೆಲೆಯುಳ್ಳದ್ದಾಗಿತ್ತು. ಒಂದು ದಿನ ಅವಳು ಔತಣಕ್ಕೆ ಕರೆಯಲ್ಪಟ್ಟಾಗ, ಅಲ್ಲಿ ತನ್ನ ದೊಡ್ಡಸ್ತಿಕೆಯನ್ನು ತೋರಿಸುವದಕ್ಕಾಗಿ, ಆ ವಜ್ರದ ಉಂಗುರವನ್ನು ಬಾಡಿಗೆ ಕೊಟ್ಟು ತರಿಸಿ ಕೊಂಡು, ಆ ರಾತ್ರೆಯಲ್ಲಾ ತನ್ನ ಬೆರಳಿಗೆ ಹಾಕಿ ಕೊಂಡಿದ್ದಳು; ಆದರೆ ಮನೆಗೆ ಬರುವಾಗ್ಯೆ ಆ ಉಂಗುರವನ್ನು ಕಳ ಕೊಂಡಳು. ಆದ ಕಾರಣ ಅವಳು ಬಹಳ ಉಪದ್ರಕ್ಕೂ ಗಂಡನ ಕೋಪಕ್ಕೂ ಗು

ರಿಯಾದಳು. ಹೀಗೆ ಅವಳು ವಜ್ರದ ಉಂಗುರದ ಸಲವಾಗಿ ಶೋಧಿಸಲ್ಪಟ್ಟು, ಬಲೆಯೊಳಗೆ ಶಿಕ್ಕಿ ಬಿದ್ದಳು.

ರೊಬ. ಅವಳು ತನ್ನ ಸೇವಕರಿಗಿಂತ ಹೆಚ್ಚು ಬುದ್ಧಿಯುಳ್ಳವಳಲ್ಲ. ಒಬ್ಬೊಬ್ಬನು ಬೋನಿನೊಳಗೆ ಶಿಕ್ಕಿ ಬೀಳುವ ಗಂಡಾಂತರದಲ್ಲಿದ್ಧಾನೆಂದು ಈಗ ನೆನಸುತ್ತೇನೆ. ಹಾಗಾದರೆ, ಅಪ್ಪಾ, ಆ ಧೊರೆಯು ಹ್ಯಾಗೆ ಬೋನಿನೊಳಗೆ ಹಿಡಿಯಲ್ಪಟ್ಟನೆಂದು ದಯ ಮಾಡಿ ಹೇಳು.

ಫ್ರಿಲಾ. ಆ ಧೊರೆಯು ಒಂದು ಜೂಜು ಆಡುವ ಮನೆಯಲ್ಲಿ ಸ್ವಲ್ಪ ಹಣಕ್ಕೋಸ್ಕರ ಜೂಜಾಡ ಮರಳು ಗೊಂಡು, ಸ್ವಲ್ಪ ಹಣ ಗೆದ್ದ ಮೇಲೆ ಹಣದ ಆಶೆ ಹೆಚ್ಚಾಗಿ, ಇನ್ನು ಜೂಜಾಡುತ್ತಾ ಹೆಚ್ಚು ಹಣ ಸಂಪಾದಿಸುತ್ತಾ ಇದ್ದು, ಕಡೆಗೆ ಕೈಗೂಡಿ ಬಂದ ಹಣವೆಲ್ಲಾ ಕಳಕೊಂಡು, ದರಿದ್ರ ಸ್ಥಿತಿಗೆ ಬಂದನು. ಈ ಪ್ರಕಾರ ಅವನು ಹಣದಾಶೆಯ ಶೋಧನೆಯಿಂದ ಬಡವನಾದದ್ದು ಮಾತ್ರವಲ್ಲದೆ, ಶೆರೆಮನೆಯಲ್ಲಿ ಬಿದ್ದು, ಅಲ್ಲಿ ಸಾಯುವ ತನಕ ತನ್ನ ಉಳದ ಕಾಲ ಕಳದನು. ಈ ಪ್ರಕಾರ ಆ ಇಡೀ ಸಂಸಾರದವರು ಬೇರೆ ಬೇರೆ ಬೋನಿನೊಳಗೆ ಶಿಕ್ಕಿ ಬಿದ್ದರು; ಆದಾಗ್ಯೂ ಅವರೆಲ್ಲರು ಕೂಡಿ, ನೀನು ಹೇಳಿದ ಹಾಗೆಯೇ, ಆ ಇಲಿಯು ಒಂದು ಸುಟ್ಟ ಗಿಣ್ಣದ ತುಂ

ಡಿಗಾಗಿ ಮರುಳು ಗೊಂಡು ಬೋನಿನೊಳಗೆ ಬಿತ್ತು ಎಂದು ಹೇಳುವರು. ಯೋಬನೆಂಬ ದೇವಭಕ್ತನು ದುಷ್ಟನ ವಿಷಯದಲ್ಲಿ ಹೇಳುವದೇನಂದರೆ: "ಅವನ ಪಾಶ ಭೂಮಿಯಲ್ಲಿಯೂ, ಅವನ ಕೊಂಡಿ ಹಾದಿಯಲ್ಲಿಯೂ ಮರೆಯಾಗಿವೆ." (ಯೋಬ. ೧೮, ೧೦.)

ರೊಬ. ಅಪ್ಪಾ, ಚಿಕ್ಕ ಹುಡುಗರೂ ದೊಡ್ಡವರೂ ಶಿಕ್ಕಿಬೀಳುವ ಬೋನುಗಳು ಎಂಥವುಗಳೆಂಬುವ ನಿನ್ನ ಅರ್ಥವು ನನಗೆ ಈಗ ತಿಳಿಯಿತು. ನಾನು ಅಂಥಾ ಒಂದು ಬೋನಿನಲ್ಲಿ ಬೀಳದ ಹಾಗೆ ಬಹಳ ಜಾಗ್ರತೆಯಾಗಿರುವೆನು.

ಫ್ರಿಲಾ. ಹೌದು, ನನ್ನ ಪ್ರಿಯ ಹುಡುಗನೇ, ನೀನು ಎಂದಿಗೂ ಅಂಥಾ ಬೋನಿನೊಳಗೆ ಬೀಳಲಿಕ್ಕಿಲ್ಲವೆಂದು ನಂಬುತ್ತೇನೆ; ಆದರೆ ನಾವು ಶೋಧನೆಯನ್ನು ಜೈಸಲಿಕ್ಕೆ ನಮ್ಮ ಸ್ವಂತ ಬಲದಿಂದ ಪ್ರಯತ್ನ ಮಾಡಿದರೆ, ನಾವು ನಿಶ್ಚಯವಾಗಿ ಬಿದ್ದು ಹೋಗುವೆವು. ಆದದರಿಂದ ನಾವು ಶೋಧನೆಯಲ್ಲಿ ಬೀಳದ ಹಾಗೆ ನಿತ್ಯವಾಗಿ ದೇವರ ಸಹಾಯವನ್ನು ಬೇಡಿಕೊಳ್ಳುವಾ. ಏನಂದರೆ, ಆ ದುಷ್ಟ ಸೈತಾನನು ಎಲ್ಲಾ ಕಡೆಯಲ್ಲಿ ನಮಗೆ ಬಲೆ ಒಡ್ಡಿ ಇಡುವದಕ್ಕೆ ಪ್ರಯತ್ನ ಮಾಡುತ್ತಾನೆ. ಅವನ ಬಲೆಯೊಳಗೆ ಬೀಳುವವರಿಗೆ ಅಯ್ಯೋ!

ಲೋಕವು ವ್ಯರ್ಥವಾದ, ಮಾಯವಾದ ಆಶೆಗಳ ಬಲೆಯನ್ನು ಒಡ್ಡುತ್ತದೆ; ಮತ್ತು ನಮ್ಮನ್ನು ಮೊದಲು ಪ್ರೀತಿ ಮಾಡಿ ನಮಗಾಗಿ ಸತ್ತ ದೇವರ ಮಗನಾದ ಯೇಸುವಿನ ಮೇಲೆ ಪ್ರೀತಿಯನ್ನಿಡದ ಹಾಗೆ, ನಮ್ಮ ಪ್ರೀತಿಯನ್ನು ತನ್ನ ಬಲೆಯೊಳಗೆ ಶಿಕ್ಕಿಸುತ್ತದೆ. ಆದ ಕಾರಣ ನಾವು ಅಲ್ಪವಾದ, ನಾಶವಾಗುವ ವಸ್ತುಗಳ ಮೇಲೆ ನಮ್ಮ ಹೃದಯದಾಶೆಗಳನ್ನು ಇಡುವ ಗಂಡಾಂತರದಲ್ಲಿದ್ದೇವೆ. ದುಷ್ಟ ಮನುಷ್ಯರು ಸಹ ಬಲೆಗಳನ್ನು ಒಡ್ಡಿ, ನಮ್ಮನ್ನು ಹಿಡಿಯ ಕಾಯುತ್ತಾರೆ. ಆದದರಿಂದ ಅಂಥವರ ವಿಷಯವಾಗಿಯೂ ಕೆಟ್ಟ ಜತೆಗಾರರ ವಿಷಯವಾಗಿಯೂ ಎಚ್ಚರಿಕೆಯಾಗಿರು; ಇಲ್ಲದಿದ್ದರೆ ಅವರು ಜಿನ್ ಎಂಬ ಸಾರಾಯಿ ಮುಂತಾದ ಬಲೆಗಳನ್ನು ಒಡ್ಡಿ ನಿನ್ನನ್ನು ಅದರೊಳಗೆ ಶಿಕ್ಕ ಬೀಳ ಮಾಡುವರು.

ಇದಲ್ಲದೆ ನಿನ್ನ ಸ್ವಂತ ಕೆಟ್ಟ ಹೃದಯವನ್ನು ನೀನು ಮುಂದಾಗಿ ಎಚ್ಚರಿಕೆಯಿಂದ ಕಾಯ ಬೇಕು; ಯಾಕಂದರೆ, ಅದು, ನಿನಗಾಗಿ ತೆರದಿಟ್ಟ ಬಲೆ ಬೋನುಗಳಲ್ಲಿ ಬೀಳುವದಕ್ಕೆ ನೀನು ಭಯ ಪಡದ ಹಾಗೆ, ನಿನ್ನನ್ನು ಪ್ರೇರೇಪಿಸುವದು; ಮತ್ತು, ನಿನ್ನನ್ನು ಕುರಿತು ಬಹು ಒಳ್ಳೆಯವನೆಂದು ನೆನಸುವ ಹಾಗೆ, ನಿನ್ನನ್ನು ಧೈರ್ಯ ಪಡಿಸುವದು; ಕಡೆಗೆ ನಿ

ನ್ನನ್ನು ದೇವರ ಚಿತ್ತಕ್ಕೆ ವಿರೋಧವಾಗಿ ನಡಿಸುವದು. ಸಾಮತಿ ಗ್ರಂಥದಲ್ಲಿ "ತನ್ನ ಸ್ವಂತ ಹೃದಯದ ಮೇಲೆ ಭರವಸ ವಿಡುವವನು ಹುಚ್ಚನು" ಎಂದು ಹೇಳುವದನ್ನು ಜ್ಞಾಪಕ ಮಾಡಿಕೊ.

ಬಡ ಇಲಿಯು ತನ್ನ ಹಶುವನ್ನು ತೃಪ್ತಿ ಪಡಿಸುವದಕ್ಕಾಗಿ ಒಂದು ಬೋನಿನೊಳಗೆ ಪ್ರವೇಶಿಸುತ್ತದೆ; ಆದರೆ ತಿನ್ನಲಿಕ್ಕೂ ಕುಡಿಯಲಿಕ್ಕೂ ವಸ್ತ್ರಗಳನ್ನು ಧರಿಸಿ ಕೊಳ್ಳುವದಕ್ಕೂ ಎಥೇಷ್ಟವಿದ್ದ ಹುಡುಗನು ತನ್ನ ಗರ್ವವನ್ನೂ ಹುಚ್ಚುತನವನ್ನೂ ಅಥವಾ ತನ್ನ ದುರಾಶೆಗಳನ್ನೂ ತೃಪ್ತಿ ಪಡಿಸುವದಕ್ಕಾಗಿ ಒಂದು ಬೋನಿನೊಳಗೆ ಪ್ರವೇಶಿಸಿದರೆ, ಅವನು ಇಲಿಗಿಂತ ಕಡೆಯಾದ ಹುಚ್ಚನಾಗಿದ್ದಾನೆ.—

ಈ ಸಂಭಾಷಣೆ ನಡಿಯುತ್ತಾ ಫ್ರಿಲಾಂದನು ಪುನಃ ಇಲಿಬೋನನ್ನು ಅಟ್ಟದ ಹಲಿಗೇ ಮೇಲೆ ಇಟ್ಟನು. ಅದು ತೀರಿದ ಕೂಡಲೇ ರೊಬರ್ತನು ತೋಟಕ್ಕೆ ಹೋಗಿ, ತನಗೆ ತಂದೆ ಹೇಳಿದ ಒಳ್ಳೇ ಬೋಧನೆಯನ್ನು ತಾನು ಮರೆಯದ ಹಾಗೆ, ಅಲ್ಲಿ ಮೊಣಕಾಲೂರಿ ದೇವರಿಂದ ಕೃಪೆಯನ್ನು ಬೇಡಿ ಕೊಂಡನು.

---

# ೫. ಪ್ರಮಾಣಿಕತನ ಮತ್ತು ಅಪ್ರಮಾಣಿಕತನವು.

ಯೊರ್ಕ್‌ಷೀರು ಎಂಬ ಒಂದು ಊರಿನಲ್ಲಿ ಫ್ರಾಂಕ ನೆಂಬ ಹುಡುಗನಿದ್ದನು. ಅವನಿಗೆ ತಂದೆ ತಾಯಿಗಳಾಗಲಿ ಆಸ್ತಿಯಾಗಲಿ ಇಲ್ಲದ ಕಾರಣ ಅವನು ತನ್ನ ಜೀವನಾರ್ಥ ಕ್ಕಾಗಿ ಬಹು ಕಷ್ಟವಾದ ಉಪಾಯಗಳನ್ನು ಪ್ರಯೋಗಿಸು ತ್ತಿದ್ದನು. ಅವನು ತನ್ನ ಊರಿನಲ್ಲಿ ಏನೂ ಕೆಲಸ ಶಿಕ್ಕದ ದೆಸೆಯಿಂದ ಲಂಡನ್ ಪಟ್ಟಣಕ್ಕೆ ಹೋದನು. ಅಲ್ಲಿ ಊರ ಹುಡುಗರು ಕೆಟ್ಟ ಸಂಭಾಷಣೆಗಳಿಂದ ಕೆಟ್ಟು ಹೋಗುವದು ಬಹು ಸುಲಭ. ಫ್ರಾಂಕನಿಗೆ ಶಿಕ್ಕಿದ ಮೊದಲನೇ ಉದ್ಯೋಗ ವು ಒಂದು ಚಿತ್ರಗೃಹದಲ್ಲಿ ಕುಡಿಯಲಿಕ್ಕೆ ಬಂದವರಿಗೆ ಸೇವಿ ಸುವದಾಗಿತ್ತು. ಈ ಉದ್ಯೋಗವು ಅವನಿಗೆ ಬಹಳ ಶೋಧನ ಕರದ್ದಾಗಿತ್ತು. ಅವನಿಗೆ ಮುಖ್ಯವಾಗಿ ರಾತ್ರೀ ಕಾಲದಲ್ಲಿ ಕೆಲಸ ಇರುವದು. ಒಂದು ದಿವಸ ಬೆಳಿಗ್ಯೆ ಫ್ರಾಂಕನು ಒಂ ದು ಚಿಕ್ಕ ಪುಸ್ತಕ ಬಿದ್ದಿರುವದನ್ನು ಕಂಡು, ಅದನ್ನು ತೆರದು ನೋಡಲು, ಅವನಿಗೆ ಬಹಳ ಹಣದ ಬೀಲುಗಳು ಶಿಕ್ಕಿದವು. ಅವು ಅಲ್ಲಿಗೆ ಬಂದು ಹೋದವರಲ್ಲಿ ಒಬ್ಬನದಾಗಿರ ಬೇಕೆಂದು

ತಿಳಿದು,ಅವುಗಳನ್ನು ಜೋಪಾನ ಮಾಡಿ ಕೊಂಡು ಇಟ್ಟಿದ್ದನು. ಆ ಮನುಷ್ಯನು ಎರಡನೇ ಸಾರಿ ಅಲ್ಲಿಗೆ ಬಂದಾಗ, ತಾನು ಕಳ ಕೊಂಡ ಬೀಲುಗಳ ಸಂಗತಿಯನ್ನು ಫ್ರಾಂಕನಿಗೆ ತಿಳಿಸಿದನು. ಆ ಬೀಲುಗಳು ಬಹಳ ಮೌಲ್ಯವುಳ್ಳದ್ದಾಗಿದ್ದದರಿಂದ ಅವನಿಗೆ ಅವು ಪುನಃ ಶಿಕ್ಕುವ ಭರವಸ ಇಲ್ಲದಿದ್ದರೂ, ಫ್ರಾಂಕನು ಅವನು ಹೇಳಿದ್ದನ್ನು ಕೇಳಿ, ನಕ್ಕು ಪ್ರಮಾಣಿಕತನದ ಸಂತೋಷದ ಮುಖವನ್ನು ತೋರಿಸಿ, ತನಗೆ ಶಿಕ್ಕಿದ ಅವನ ಬೀಲುಗಳನ್ನು ತನ್ನ ಕಿಶೆಯಿಂದ ಎಳದು ತತ್‍ಕ್ಷಣದಲ್ಲಿ ಅವನಿಗೆ ಒಪ್ಪಿಸಿದನು. ಕಳಕೊಂಡದ್ದನ್ನು ಹೊಂದಿದವನು ತನ್ನ ಪತ್ರಗಳೆಲ್ಲಾ ಸಮ ಉಂಟೋ? ಎಂದು ಚೌಕಶಿ ಮಾಡಿ ನೋಡಿ, ಎಲ್ಲಾ ಸಮ ಉಂಟೆಂದು ತಿಳು ಕೊಂಡು, ಸಂತೋಷ ಪಟ್ಟನು.

ಈ ಪ್ರಕಾರ ಫ್ರಾಂಕನು ನಂಬಿಕೆಯುಳ್ಳವನೂ ಸತ್ಯವಂತನೂ ಎಂದು ಕಂಡು, ಆ ಧೊರೆಯು ಅವನಿಗೆ ತನ್ನ ಖಾರ್ಕಾನೆಯಲ್ಲಿ ಒಂದು ಒಳ್ಳೇ ಉದ್ಯೋಗವನ್ನು ಕೊಟ್ಟನು. ಈ ಪ್ರಕಾರ ಅವನು ಕ್ರಮೇಣ ಹೆಚ್ಚು ಹೆಚ್ಚು ಘನವುಳ್ಳ ಉದ್ಯೋಗಗಳನ್ನು ಹೊಂದಿ, ಬಹು ಮಾನ ಪಟ್ಟ ಧೊರೆಯಾಗಿ ಸುಖದಲ್ಲಿದ್ದನು. ಆದರೆ ಅಪ್ರಮಾಣಿಕರಾದವರು ಈ ಸ್ಥಿತಿಗೆ ವಿರೋಧವಾದ ದುಃಖ ಕಷ್ಟಗಳಿಗೆ ಗುರಿಯಾಗುತ್ತಾರೆ. ಅಂ

ಥಾದೊಂದು ಸಂಗತಿಯು ಇದರ ಕೆಳಗೆ ವಿವರಿಸಲ್ಪಡುವದು. ಪೂರ್ವದಲ್ಲಿ ವಿಲಾಯತಿ ಖಂಡದಲ್ಲಿ ಕಳ್ಳತನಕ್ಕಾಗಿ ಮರಣಶಿಕ್ಷೆ ಕೊಡುವಂಥ ನಿಬಂಧನೆ ಇತ್ತು. ಆ ಕಾಲದಲ್ಲಿ ಇಬ್ಬರು ಕನ್ನಗಳ್ಳತನದ ಅಪರಾಧಕ್ಕೋಸ್ಕರ ಮರಣದಂಡನೆಯ ತೀರ್ಪು ಹೊಂದಿದರು. ಅವರಲ್ಲಿ ಒಬ್ಬನು ತನ್ನ ಮರಣಕ್ಕೆ ಸಿದ್ಧವಾಗುವ ಮುಂಚೆ ಬೋಧಕನ ಬಳಿಯ ಪಾಪದ ಅರಿಕೆ ಮಾಡುವಾಗ್ಯೆ ಹೇಳಿದ್ದು—ನಾನು ಚಿಕ್ಕವನಾಗಿದ್ದಾಗ್ಯೆ ನನ್ನ ತಾಯಿಯು ನಿದ್ದೆ ಗೈಯುವ ಸಮಯದಲ್ಲಿ ಅವಳ ಕಿಸೆಯಿಂದ ಒಂದು ಪಾವಲಿಯನ್ನು ಕದ್ದು ಕೊಂಡೆನು. ಇದು ನನ್ನ ಮೊದಲಿನ ಕಳ್ಳತನದ ಕೆಲಸವಾಗಿತ್ತು. ಈ ಚಿಕ್ಕ ಅಪರಾಧದಿಂದ ಬರ ಬರ ಹೆಚ್ಚು ಪಾಪದಲ್ಲಿ ನಡಿಸಲ್ಪಟ್ಟು ಕಡೆಗೆ ಈ ದೊಡ್ಡ ನಾಚಿಕೆಯಾದ ಮರಣಶಿಕ್ಷೆಗೆ ಗುರಿಯಾದೆನು ಎಂದು ಹೇಳಿ, ಅತ್ತನು.

ಆದದರಿಂದ ಓದುವವನೇ, ಮೊದಲಿನ ಶೋಧನೆ ಚಿಕ್ಕದಾಗಿದ್ದರೂ, ಅದರಲ್ಲಿ ಬೀಳದ ಹಾಗೆ ಎಚ್ಚರವಾಗಿರು. ಶೋಧನೆಯನ್ನು ಜೈಸುವದಕ್ಕೆ ಸಹಾಯ ಮಾಡುವ ಯೇಸು ಕ್ರಿಸ್ತನಿಂದ ಕೃಪೆಯನ್ನು ಬೇಡಿಕೋ. ನಿನ್ನ ಪಾಪಗಳನ್ನು ಮನ್ನಿಸುವದಕ್ಕೆ ಮಾತ್ರವಲ್ಲ, ನಿನ್ನನ್ನು ನೀತಿಯಲ್ಲಿಯೂ ಪರಿ

ಶುದ್ಧತ್ವದಲ್ಲಿಯೂ ಕಾಪಾಡುವದಕ್ಕಾಗಿ ಆತನಿಗೆ ಬೇಡಿಕೋ. "ಶೋಧನೆಯನ್ನು ತಾಳಿ ಗೆಲ್ಲುವ ಮನುಷ್ಯನು ಭಾಗ್ಯವಂತನು; ಯಾಕಂದರೆ ಅವನು ಪರೀಕ್ಷಿತನಾದ ಮೇಲೆ, ಕರ್ತನು ತನ್ನನ್ನು ಪ್ರೀತಿ ಮಾಡುವವರಿಗೆ ವಾಗ್ದತ್ತ ಮಾಡಿದಂಥ ಜೀವದ ಕಿರೀಟವನ್ನು ಹೊಂದುವನು." (ಯಾಕೊ. ೧, ೧೨.)

---

## ೬. ಮುಳ್ಳುಗಿಡವು.

ಒಂದು ದಿವಸ ಸಾಯಂಕಾಲದ ಸಮಯದಲ್ಲಿ ಒಬ್ಬ ಧೊರೆಯು ತನ್ನ ಮಗನಾದ ಹೆನರಿ ಎಂಬ ಹುಡುಗನನ್ನು ಸಂಗಡ ಕರಕೊಂಡು ಘಾಳಿ ತೆಗೆದು ಕೊಳ್ಳಲಿಕ್ಕೆ ಹೊರಟನು. ಆಗ್ಯೆ ಸೂರ್ಯ ಅಸ್ತಮಾನವಾಗುವ ಸಮಯವಾದರಿಂದ, ಪಶ್ಚಿಮ ದಿಕ್ಕು ಬಹು ಪ್ರಕಾಶದಿಂದ ಥಳಥಳಿಸುತ್ತಿತ್ತು; ಮತ್ತು ಆ ಕಡೆಯಲ್ಲೆಲ್ಲಾ ಸೌಂದರ್ಯವಾಗಿ ಕಾಣುತ್ತಿತ್ತು. ಹೆನರಿಯು ತನ್ನ ಸಂಗಡ ಆಡುವದಕ್ಕೆ ನಾಯಿಯನ್ನು ಕರಕೊಂಡು ಹೋಗಿದ್ದನು. ಸೂರ್ಯವು ಅಸ್ತಮಾನವಾಗುವದನ್ನು ನೋಡ ಬೇಕೆಂದು, ತಂದೆಯೂ ಮಗನೂ ಒಂದು ಮರದ ಬುಡದಲ್ಲಿ ಕೂತಿದ್ದರು. ಘಾಳಿಯು ಸೌಖ್ಯವಾ

ಗಿತ್ತು; ಆದರೆ ಅಂದಿಗೆ ಸ್ವಲ್ಪ ಮುಂಚೆ ಬಹಳ ತುಫಾನು ಇದ್ದದರಿಂದ, ಹೊಲದಲ್ಲಿ ಮೇಯುವ ಕುರಿಗಳು ಬಹಳವಾಗಿ ಘಾಬ್ರಿಯಾಗಿ ತಮ್ಮ ಆಶ್ರಯಕ್ಕಾಗಿ ಮುಳ್ಳುಗಳ ಪೊದೆಯನ್ನು ಆರಿಸಿ ಕೊಂಡಿದ್ದವು. ಹೆನರಿಯು ತಂದೆಯ ಸಮೀಪವಾಗಿ ನಾಯಿಯ ಸಂಗಡ ಆಡುತ್ತಾ ಇರಲು, ಸಮೀಪವಾದ ಮುಳ್ಳು ಪೊದೆಯಲ್ಲಿ ಬಿಳೇದೇನಾದರೂ ಕಂಡು ಆಶ್ಚರ್ಯ ಪಟ್ಟು, ಅದೇನು ನೋಡ ಬೇಕೆಂದು, ತಾನು ಅಲ್ಲಿಗೆ ಹೋಗುವದಕ್ಕೆ ಹೆನರಿಯು ತಂದೆಯ ಹತ್ತರ ಅಪೇಕ್ಷಿಸಿದನು. ತಂದೆಯು ಅಪ್ಪಣೆ ಕೊಟ್ಟ ಮೇಲೆ ಹೆನರಿಯು ಅಲ್ಲಿಗೆ ಹೋಗಿ, ಮುಳ್ಳುಗಿಡಗಳಲ್ಲಿ ಶಿಕ್ಕಿಕೊಂಡ ಕುರಿಯ ಉಣ್ಣೆಯನ್ನು ಕಂಡು, ಅದು ಈ ಮುಳ್ಳಿನ ಗಿಡದೊಳಗೆ ಹ್ಯಾಗೆ ಬಂತೆಂದು ತಂದೆಯೊಡನೆ ಕೇಳ ಬೇಕೆಂದು, ಓಡಿ ಬಂದು, ಅದರ ವಿಷಯ ವಿಚಾರ ಮಾಡಿದನು. ಆಗ್ಯೆ ತಂದೆಯು ಅವನಿಗೆ ಮೇಯುವ ಕುರಿಮಂದೆಯನ್ನು ತೋರಿಸಿ, ಅದು ಕುರಿಮಂದೆ ಹೌದೋ? ಅಲ್ಲವೋ? ಹೇಳು, ಅಂದನು.

ಹೆನರಿ. ಹೌದು, ಅಪ್ಪಾ, ನನಗೆ ಕಾಣುತ್ತದೆ; ಆದರೆ ಆ ಕುರಿಗಳ ಉಣ್ಣೆಯು ಈ ಮುಳ್ಳುಗಿಡದೊಳಗೆ ಹ್ಯಾಗೆ ಬಂತು?

ತಂದೆ. ಮಗನೇ, ಕೇಳು, ಈ ಹೊತ್ತಿನ ಘಾಳಿ ತು

ಘಾನು ಭಾರಿ ಇದ್ದದರಿಂದ, ಆ ಕುರಿಗಳು ಒಂದು ವೇಳ್ಯ ಈ ಮುಳ್ಳುಗಿಡಗಳೊಳಗೆ ಆಶ್ರಯ ಮಾಡಿ ಕೊಂಡಿದ್ದಾಗ, ಅವುಗಳ ಉಣ್ಣೆಯು ಮುಳ್ಳುಗಳಿಗೆ ಶಿಕ್ಕಿ ಕೊಂಡಿತು.

ಹೆನರಿ. (ಸ್ವಲ್ಪ ಶಿಟ್ಟು ಮಾಡಿಕೊಂಡು) ಅಪ್ಪಾ, ಈ ಗಿಡಗಳು ಕುರಿಗಳ ಉಣ್ಣೆಯನ್ನು ಕಿತ್ತು ಕೊಳ್ಳುವದರಿಂದ ಇವು ಒಳ್ಳೇ ಗಿಡಗಳಲ್ಲ; ಇಂಥವು ದೇವರು ಯಾಕೆ ಉಂಟು ಮಾಡಿದನು? ಅಪ್ಪಾ, ಮನುಷ್ಯರು ಇವುಗಳನ್ನು ಯಾಕೆ ಸಮೂಲವಾಗಿ ಕಿತ್ತು ಹಾಕುವದಿಲ್ಲ? ನಾಳೆ ಬೆಳಿಗ್ಯೆ ನಾನೆದ್ದು ಒಂದು ಕೊಡಲಿ ತೆಕ್ಕೊಂಡು, ಈ ಕೆಟ್ಟ ಗಿಡಗಳೆಲ್ಲಾ ನಿಶ್ಚಯವಾಗಿ ಕಡಿದು ಹಾಕುವೆನು; ಅಪ್ಪಾ, ನೀನೂ ನನ್ನ ಸಂಗಡ ಬಂದರೆ ನಾವು ಈ ಕೆಲಸವನ್ನು ಬೇಗ ತೀರಿಸಿ ಕೊಂಡು ಹೋಗ ಬಹುದು.

ತಂದೆ. ಒಳ್ಳೇದು, ಇದರ ವಿಷಯದಲ್ಲಿ ನಾನು ಆಲೋಚನೆ ಮಾಡುವೆನು; ಆದರೆ ಈ ಮುಳ್ಳುಗಿಡಗಳು ಕುರಿಗಳ ಮೈ ಮೇಲಿನಿಂದ ಉಣ್ಣೆ ಕಿತ್ತು ಕೊಂಡಿತು, ಖರೆ; ಆದರೆ ಇದಕ್ಕೆ ಬೇರೇನಾದರೂ ಒಳ್ಳೇ ಕಾರಣ ಇದ್ದೀತು. ಬೇಸಿಗೆ ದಿವಸದಲ್ಲಿ ಕುರುಬರು ಕುರಿಗಳ ಉಣ್ಣೆ ತೆಗದದ್ದು ನಿನಗೆ ಜ್ಞಾಪಕ ಉಂಟೋ?

ಹೆನರಿ. ಹೌದು, ಅಪ್ಪಾ, ನನಗೆ ಜ್ಞಾಪಕವದೆ. ಛಳಿ ಕಾಲ ಹೋದ ಮೇಲೆ ಕುರಿಗಳಿಗೆ ಉಣ್ಣೆ ಅವಶ್ಯವಿಲ್ಲ. ಒಂದು ವೇಳ್ಯ ಉಣ್ಣೆ ತೆಗಿಯದಿದ್ದರೆ, ಬೇಸಿಗೆ ಕಾಲದಲ್ಲಿ ಅದು ತಾನೇ ತನ್ನಷ್ಟಕ್ಕೆ ಉದರಿ ಹೋಗುವದು, ಮತ್ತು ವ್ಯರ್ಥವಾಗಿ ಹೋಗುವದು ಎಂದು ನೀನು ಹೇಳಿದ್ಧೀ ಅಲ್ಲ. ಆದರೆ ಅದು ತನ್ನಷ್ಟಕ್ಕೆ ಉದರಿ ಬೀಳುವದು ಒಳ್ಳೇದಲ್ಲ; ಏನಂದರೆ: ಸಮಸ್ತ ಪಶುಗಳ ಉಪಯೋಗ ಮಾಡ ಬೇಕೆಂದು ದೇವರು ಅವುಗಳನ್ನು ಸೃಷ್ಟಿಸಿದ್ಧಾನೆ. ಮತ್ತು ಉಣ್ಣೆಯು ವಸ್ತ್ರ ಮಾಡುವದಕ್ಕೆ ಯೋಗ್ಯವಾಗಿದೆ. ಇದಲ್ಲದೆ ಅದರಿಂದ ಬೇರೆ ಬೇರೆ ಪದಾರ್ಥಗಳಾಗುತ್ತವೆಂದು, ನನಗೆ ತಿಳದದೆ. ಆದರೆ ಈ ಮುಳ್ಳುಗಿಡಗಳಿಗೆ ಉಣ್ಣೆಯು ಏನೂ ಉಪಯೋಗಕ್ಕೆ ಬರುವದಿಲ್ಲ. ಅವುಗಳಿಗೆ ಶಿಕ್ಕಿ ಕೊಂಡ ಉಣ್ಣೆಯು ವ್ಯರ್ಥವಾಗುತ್ತದೆ; ಆದ ಕಾರಣ ಈ ಗಿಡಗಳನ್ನು ಕಡಿದು ಹಾಕುವದು ಒಳ್ಳೇದಲ್ಲವೋ?

ತಂದೆ. ಒಳ್ಳೇದು ಮಗನೇ, ನಾಳೆ ಬೆಳಿಗ್ಯೆ ನಾವು ಇಲ್ಲಿಗೆ ಬರುವಾ; ಆಗ್ಯೆ ಅವುಗಳನ್ನು ಕಡಿದು ಹಾಕುವದಾಗಲಿ, ಬಿಡುವದಾಗಲಿ ನಮಗೆ ತಿಳಿಯುವದು.

ಹೆನರಿಗೆ ತಂದೆಯು, ಒಳ್ಳೇ ಕೆಲಸ ಮಾಡುವವನು ಸು

ಖಿಯಾಗಿರುವನೆಂದು ಹೇಳಿದ ಬುದ್ಧೀ ಮಾತು ಮನಸ್ಸಿನಲ್ಲಿ ಶೇರಿತ್ತು. ಆದರೆ ಯಾವ ಕೆಲಸ ಒಳ್ಳೇದು? ಯಾವ ಕೆಲಸ ಕೆಟ್ಟದು? ಎಂಬ ವಿಚಾರವು ಅವನ ಗ್ರಹಿಕೆಗೆ ಬರಲಿಲ್ಲ. ಅವನು ಚನ್ನಾಗಿ ಆಲೋಚನೆ ಮಾಡದೆ ಅವಸರ ಪಟ್ಟು, ಒಂದೊಂದು ಕೆಲಸಕ್ಕೆ ಕೈ ಹಾಕುತ್ತಿದ್ದನು. ಮುಳ್ಳಿನ ಗಿಡಗಳ ವಿಷಯದಲ್ಲಿ ಏನು ಸಂಭವಿಸುವದೆಂದು, ಇದರ ಕೆಳಗಿನ ಅಭಿಪ್ರಾಯದಲ್ಲಿ ನಿಮಗೆ ತಿಳಿಯುವದು. ಹೆನರಿಗೆ ತನ್ನ ಆಲೋಚನೆಯು ಒಳ್ಳೇದಾಗಿ ಕಂಡಿತು; ಏನಂದರೆ, ತಾನು ಮಾಡುವ ಕೆಲಸದಿಂದ ಒಳ್ಳೇ ಉಪಕಾರವಾದೀತೆಂದು ನೆನಸಿದನು. ಅವನು ತನ್ನ ಇಚ್ಛೆಯನ್ನು ಪೂರೈಸುವದಕ್ಕೆ ನಿರ್ಧಾರ ಮಾಡಿ ಕೊಂಡದರಿಂದ, ಅದೇ ಆಲೋಚನೆಯಿಂದ ನಿದ್ದೆ ಮಾಡದೆ ರಾತ್ರೆ ಎಲ್ಲಾ ಕಳದನು.

ಮರು ದಿವಸ ಬೆಳಿಗ್ಯೆ ಎದ್ದು, ವಸ್ತ್ರಗಳನ್ನು ಧರಿಸಿ ಕೊಂಡು, ತಂದೆಯ ಕೋಣೆಗೆ ಬಂದು, ಅವನನ್ನು ಎಬ್ಬಿಸಿದನು. ಆ ಮೇಲೆ ಹೆನರಿಯು ಕೊಡಲಿ ತೆಗದು ಕೊಂಡು, ತಂದೆಯ ಸಂಗಡ ಹೊರಟನು. ಅವನು ಅಷ್ಟು ಆತುರ ಪಟ್ಟದರಿಂದ, ತನ್ನನ್ನು ರಾತ್ರೆಯೆಲ್ಲಾ ಕಾಪಾಡಿ ಸಂರಕ್ಷಣೆ ಮಾಡಿದ ದೇವರಿಗೆ ಸ್ತೋತ್ರದ ಪ್ರಾರ್ಥನೆ ಸಹ ಮಾಡದೆ, ತಾನು ನೆನಸಿದ ಕೆಲಸವನ್ನು ತೀರಿಸುವದಕ್ಕೆ ಹೊರಟನು.

ನನ್ನ ಪ್ರಿಯ ಹುಡುಗರೇ, ಯಾವದೊಂದು ಕೆಲಸಕ್ಕಾದರೂ ನೀವು ಬಹಳ ಅವಸರ ಪಟ್ಟು ದೇವರ ಉಪಕಾರವನ್ನು ಮರತು ಹೋಗ ಬಾರದು; ಅದು ಬಹಳ ಕೆಟ್ಟದು. ದೇವರು ಸಮಸ್ತರ ತಂದೆಯಾಗಿದ್ಧಾನೆ. ಆತನೇ ಸರ್ವರನ್ನು ರಕ್ಷಣೆ ಮಾಡುತ್ತಾನೆ. ಹೆನರಿಯು ಅವಸರದಿಂದ ನಡದನು; ಆದರೆ ತಂದೆಯು ಮೆಲ್ಲಕ್ಕೆ ನಡಿಯುತ್ತಾ ಹೆನರಿಗೆ ಅಲ್ಲಿ ಇಲ್ಲಿ ಒಳ್ಳೇ ಗಿಡಗಳನ್ನು ತೋರಿಸುತ್ತಾ ದೇವರ ವಿಷಯದಲ್ಲಿ ಬೋಧಿಸುತ್ತಾ ನಡದನು. ಹೀಗೆ ಇಬ್ಬರು ಮುಳ್ಳು ಗಿಡಗಳ ಬಳಿಗೆ ಬಂದು ಮುಟ್ಟಿದರು.

ಹೆನರಿ. ಅಪ್ಪಾ, ಈಗ ನಾವು ಈ ಕೆಲಸವನ್ನು ಆರಂಭಿಸುವಾ.

ತಂದೆ. ನಿಲ್ಲು, ಸ್ವಲ್ಪ ತಾಳ್ಮೆಯಾಗಿರು; ಮಗನೇ, ಇಷ್ಟ ಅವಸರ ಪಡ ಬೇಡ; ನೋಡು, ಆ ಗಿಡಗಳ ಮೇಲೆ ಗುಬ್ಬಿಗಳ ಹಿಂಡು ಕೂತು ಕೊಂಡದೆ; ಆ ಪಕ್ಷಿಗಳಿಗೆ ಉಪದ್ರ ಕೊಡ ಬಾರದು; ಅವುಗಳು ಏನು ಮಾಡುತ್ತವೆಂದು, ನೋಡುವಾ.

ತರುವಾಯ ಹೆನರಿಯು ತಂದೆಯ ಮಾತಿಗೆ ವಿಧೇಯನಾಗಿ, ಪಕ್ಷಿಗಳ ಕೆಲಸವನ್ನು ನೋಡಿ, ಒಂದು ದಿಣ್ಣೆಯ

ಮೇಲೆ ತಂದೆಯ ಸಂಗಡ ಕೂತು ಕೊಂಡು, ಅವುಗಳು ಆ ಮುಳ್ಳು ಗಿಡಗಳಿಂದ ಉಣ್ಣೆಯನ್ನು ಒಯ್ಯುವದನ್ನು ನೋಡಿದನು.

ಹೆನರಿ. ಅಪ್ಪಾ, ಈ ಪಕ್ಷಿಗಳು ಆ ಉಣ್ಣೆಯಿಂದ ಏನು ಮಾಡುತ್ತವೆ? ಅದರಿಂದ ಅವುಗಳಿಗೇನು ಉಪಯೋಗವಾಗುತ್ತದೆ?

ತಂದೆ. ಮಗನೇ, ದೇವರು ಸಮಸ್ತ ಜೀವ ಜಂತುಗಳನ್ನು ಕಾಪಾಡುವ ಚಿಂತೆ ಮಾಡುತ್ತಾನೆಂದು, ಇದರಿಂದ ತಿಳ ಕೊಳ್ಳ ಬೇಕು. ದೇವರ ಆಜ್ಞೆಯ ಹೊರತು ಒಂದು ಗುಬ್ಬಿಯಾದರೂ ಬೀಳದೆಂದು ನೀನು ದೇವರ ವಾಕ್ಯದಲ್ಲಿ ಓದಲಿಲ್ಲವೋ? ಅವುಗಳು ತಮಗೆ ಬೆಚ್ಚಗಾದ ಮೆತ್ತನ ಮನೆಗಳು ಬೇಕೆಂದು ದೇವರ ಕೃಪೆಯಿಂದ ಬುದ್ಧಿ ಪಡ ಕೊಂಡಿದ್ದಾವೆ; ಮತ್ತು ಇನ್ನು ಕೆಲವು ದಿವಸದ ಮೇಲೆ ತಮಗೆ ಮರಿಗಳಾದಾವು ಎಂದು, ಅವುಗಳು ತಿಳು ಕೊಂಡು, ಈಗಲೇ ಗೂಡು ಕಟ್ಟುತ್ತವೆ. ಅವು ತಮ್ಮ ಮರಿಗಳಿಗೆ ಸುಖವಾಗ ಬೇಕೆಂದು, ಆ ಮುಳ್ಳುಗಿಡಗಳಿಗೆ ಹತ್ತಿ ಕೊಂಡಿದ್ದ ಉಣ್ಣೆಯನ್ನು ತೆಗದು ಕೊಳ್ಳುತ್ತವೆ. ಈಗ ಮುಳ್ಳುಗಿಡಗಳಿಂದ ಸಣ್ಣ ಪಕ್ಷಿಗಳಿಗೆ ಎಷ್ಟು ಉಪಕಾರವಾಗುತ್ತದೆಂದು, ನೀನು ತಿಳ ಕೊಳ್ಳ

ಬಹುದು; ಮತ್ತು ಆ ಗಿಡಗಳು ಪೃಥ್ವಿಯ ಮೇಲೆ ವ್ಯರ್ಥವಾಗಿ ಬೆಳಿಯದೆ ಬೇರೆ ಜೀವಿಗಳಿಗೆ ಸಹಾಯ ಮಾಡುತ್ತವೆಂದು, ನಾವು ನೋಡುತ್ತೇವಲ್ಲ? ಈಗ ನಿನ್ನ ಮನಸ್ಸು ಏನು? ಆ ಗಿಡಗಳನ್ನು ಕಡಿಯ ಬೇಕೋ ಬೇಡವೋ?

ಹೆನರಿ. ಅಪ್ಪಾ, ಹಾಗಾದರೆ, ಆ ಗಿಡಗಳನ್ನು ನಾವು ಕಡಿಯ ಬಾರದು. ಆದರೆ ಈ ಗಿಡ ಹೊರತು ಬೇರೆ ಉಪಾಯದಿಂದ ಆ ಪಕ್ಷಿಗಳಿಗೆ ಉಣ್ಣಿಯನ್ನು ಕೊಡುವದಕ್ಕೆ ದೇವರಿಗೆ ಸಾಮರ್ಥ್ಯ ಇಲ್ಲವೋ?

ತಂದೆ. ದೇವರಿಗೆ ಸಾಮರ್ಥ್ಯ ಉಂಟು, ಅದಕ್ಕೆ ಸಂಶಯವಿಲ್ಲ; ಆದರೆ ಆತನು ಇದೇ ಉಪಾಯ ಮಾಡಿದ್ಧಾನೆ; ಆದದರಿಂದ ಎಲ್ಲಾದಕ್ಕಿಂತ ಇದೇ ಉಪಾಯ ಒಳ್ಳೇದೆಂದು ಕಾಣುತ್ತದೆ. ಪ್ರಿಯ ಮಗನೇ, ಕೇಳು; ದೇವರು ಪೃಥ್ವಿಯಲ್ಲಿ ತಾನು ಉಂಟು ಮಾಡಿದೆಲ್ಲಾದರ ಮೇಲೆ ದೃಷ್ಟಿ ಇಟ್ಟು, ಅವುಗಳ ಪೋಷಣಕ್ಕಾಗಿ ಚಿಂತೆ ಮಾಡುತ್ತಾನೆ. ಆದದರಿಂದ ಮನುಷ್ಯರಾದ ನಾವು ಆತನ ಮೇಲೆ ಪೂರ್ಣ ಭರವಸವನ್ನಿಟ್ಟು, ಆತನ ಕೃಪೆಯನ್ನು ದಿನದಿನಾಲು ಹುಡುಕ ಬೇಕು ಎಂಬುವ ಹಾಗೆ, ದೇವರು ಒಂದೊಂದು ಉಪಾಯ ಮಾಡಿಟ್ಟದ್ಧಾನೆ. ಒಂದೊಂದು ವೇಳ್ಯ ನಾವು ಒಂದೇ ಕಾರ್ಯದ ವಿಷ

ಯದಲ್ಲಿ ಮಾತ್ರ ನೋಡಿದರೆ, ಅದರ ಕಾರಣವು ನಮ್ಮ ಲಕ್ಷ್ಕೆ ಬರುವದಿಲ್ಲ; ಆದಾಗ್ಯೂ ಅದಕ್ಕೆ ಏನಾದರೂ ಒಳ್ಳೇ ಕಾರಣ ಇರಬೇಕೆಂದು ನಾವು ತಿಳ ಕೊಳ್ಳ ಬೇಕು. ದೇವರು ಪಕ್ಷಿಗಳ ವಿಷಯದಲ್ಲಿ ಸಹಾ ಚಿಂತೆ ಮಾಡುತ್ತಾನೆಂದು, ಸ್ಪಷ್ಟ ಕಾಣುತ್ತದೆ. ಇದರಿಂದ ನಮಗೂ ನಮ್ಮ ಸಂಸಾರಕ್ಕೂ ಅವಶ್ಯವಾದದ್ದೆಲ್ಲಾ ದೇವರೇ ಕೊಡುವನೆಂಬ ಭರವಸವು ನಮ್ಮಲ್ಲಿ ಬೆಳಿಯುವದು.—

ಪ್ರಿಯ ಹುಡುಗರೇ, ಈ ವಿಷಯದಲ್ಲಿ ನೀವು ವಿಚಾರ ಮಾಡುವಾಗ್ಯೆ ನಿಮ್ಮ ಆತ್ಮದ ವಿಷಯದಲ್ಲಿ ಸಹಾ ವಿಚಾರ ಮಾಡಿರಿ; ಏನಂದರೆ, ಅದು ಎಂದೆಂದಿಗೂ ಸಾಯದೆ ಬದುಕಿರುವದು. ಆತ್ಮವು ಬಹು ಅಮೂಲ್ಯವಾದ ವಸ್ತು; ಅದರ ವಿಷಯದಲ್ಲಿ ವಿಚಾರ ಮಾಡುವದು ಸಂಸಾರದ ಕಾರ್ಯಗಳ ವಿಚಾರಕ್ಕಿಂತ ಅಧಿಕ ಪ್ರಯೋಜನವಾದದ್ದು. ಆತ್ಮವು ಎಂದಿಗೂ ಸಾಯುವದಿಲ್ಲವೆಂದು ತಿಳಿದು, ತಾನು ಹ್ಯಾಗೆ ಇದ್ಧೇನೆ? ಮರಣದ ತರುವಾಯ ತನಗೆ ಯಾವ ಗತಿ ಸಂಭವಿಸುವದು? ಎಂಬ ಚಿಂತೆಯಿಂದ ವಿಚಾರ ಮಾಡ ಬೇಕು.—

ತಂದೆ. ದೇವರ ವಾಕ್ಯದಲ್ಲಿ ಪಾಪಿಷ್ಟನು ಶಿಕ್ಷೆಗೆ ಯೋಗ್ಯನೆಂದು ಬರದದೆ. ಆದರೆ ಪಾಪಿಷ್ಟನಿಗೆ ತಕ್ಕ ಶಿಕ್ಷೆ ಯಾವ

ದೋ ಅದೇ ಶಿಕ್ಷೆ ದೇವರು ತನ್ನ ಮಗನಾದ ಯೇಸು ಕ್ರಿಸ್ತನಿಗೆ ನೇಮಿಸಿದನು. ಆತನಲ್ಲಿ ವಿಶ್ವಾಸವಿಡುವದರಿಂದ ನಮಗೆ ರಕ್ಷಣ್ಯವಾಗುತ್ತದೆ. ಆತನು ನಮಗಾಗಿ ಪಟ್ಟ ಶ್ರಮೆಯನ್ನು ನಾವು ಜ್ಞಾಪಕ ಮಾಡಿದರೆ, ದೇವರ ಕೃಪೆ ನಮ್ಮ ಮೇಲೆ ಎಷ್ಟು ದೊಡ್ಡದೆಂದು ಕಾಣುವದು.

ಹೆನರಿ. ಅಪ್ಪಾ, ಹೌದು, ನನಗೆ ಜ್ಞಾಪಕ ಉಂಟು. ದೇವರ ವಾಕ್ಯದಲ್ಲಿ ಯೇಸು ಕ್ರಿಸ್ತನ ಶ್ರಮೆಯ ವಿಷಯದಲ್ಲಿ ಬರದದೆ; ಏನಂದರೆ ಪಕ್ಷಿಗಳಿಗೆ ಗೂಡುಗಳುಂಟು, ಆದರೆ ದೇವರ ಮಗನಿಗೆ ತಲೆ ಇಡಲಿಕ್ಕೂ ಸ್ಥಳವಿಲ್ಲವು.

ತಂದೆ. ಹುಡುಗನೇ, ಯೇಸು ಕ್ರಿಸ್ತನು ಮರಣದ ಸ್ತಂಭಕ್ಕೆ ಜಡಿಯಲ್ಪಡುವ ಮುಂಚೆ, ಬಹಳ ದುಃಖ ಪಟ್ಟನೆಂದು ಇದರಿಂದ ನಾವು ತಿಳಿಯ ತಕ್ಕದ್ದು. ಪ್ರಿಯ ಮಗನೇ, ಆತನಲ್ಲಿ ವಿಶ್ವಾಸವನ್ನಿಡು. ಪಾಪಿಷ್ಠರಿಗೋಸ್ಕರ ಅತಿ ದರಿದ್ರನಾಗಿ, ತನ್ನ ಪ್ರಾಣವನ್ನು ಬಲಿಯಾಗಿ ಅರ್ಪಿಸಿದವನ ಆಜ್ಞೆಗಳನ್ನು ಕೈಕೊಳ್ಳುವದು ನಮಗೆ ತಕ್ಕದಲ್ಲವೋ? ಆತನ ಮೇಲೆ ನಾವು ಪ್ರೀತಿ ಇಡ ಬೇಡವೋ?

ಹೆನರಿ. ಅಪ್ಪಾ, ಖರೆ, ಹಾಗೆ ಮಾಡ ಬೇಕು. ನಾನೂ ಆತನನ್ನು ಪ್ರೀತಿ ಮಾಡ ಬೇಕೆಂಬ ನಿರ್ಧಾರ ಮಾಡಿದ್ದೇನೆ.

ದೇವರು ಉತ್ತಮನು, ಆತನು ಮಾಡುವ ಸಮಸ್ತ ಕೆಲಸವು ಉತ್ತಮವಾದದ್ದು, ಆತನು ವ್ಯರ್ಥವಾದ ಕೆಲಸ ಒಂದಾದರೂ ಮಾಡುವದಿಲ್ಲವೆಂದು, ಈ ಮುಳ್ಳುಗಿಡಗಳಿಂದ ತಿಳುಕೊಂಡೆನು.

ತಂದೆ. ಒಳ್ಳೇದು, ಹೆನರಿ, ಈ ಮಾತು ನಿನ್ನ ಮನಸ್ಸಿನಲ್ಲಿ ಬೇರೂರಲಿ. ಈಗ ಹೊತ್ತು ಬಹಳವಾಯಿತು. ನಡಿ, ಮನೆಗೆ ಹೋಗುವಾ.

---

## ೭. ಕೃಪಣ ಹುಡುಗನು.

ರೊಬರ್ತ ಮತ್ತು ಆರ್ಥರ್ ಎಂಬ ಇಬ್ಬರು ಹುಡುಗರು ದಾರಿಯಲ್ಲಿ ಒಬ್ಬರನ್ನೊಬ್ಬರು ಕಂಡು ಮಾಡಿದ ಸಂಭಾಷಣೆಯು.

ರೊಬ. ಎಲೇ ಆರ್ಥರ, ನನ್ನ ಕೈಯಲ್ಲಿ ಏನುಂಟು? ಹೇಳು!

ಆರ್ಥ. ಅದು ಏನೆಂದು, ನಾನು ಹೇಳ ಕೂಡದು; ಅದು ನೋಡದ ಹೊರತು ಹ್ಯಾಗೆ ಹೇಳ ಬಹುದು? ಅದನ್ನು ನಾನು ನೋಡಲಿ.

ರೊಬ. ಒಳ್ಳೇದು, ಹಾಗಾದರೆ ನೋಡು! ಅದು ಅರ್ಧ ರೂಪಾಯಿ. ಈ ಹೊತ್ತು ನನ್ನ ಜನ್ಮದಿವಸವಾದ್ದರಿಂದ ನನ್ನ ಅಜ್ಜಿಯು ನನ್ನ ಸ್ವಂತ ಉಪಯೋಗಕ್ಕೆಂತ ಅದನ್ನು ಕೊಟ್ಟಿದ್ಧಾಳೆ.

ಆರ್ಥ. ನನ್ನ ಅಣ್ಣನು ನನಗೂ ಒಂದು ಅರ್ಧ ರೂಪಾಯಿ ಕೊಟ್ಟಿದ್ಧಾನೆ. ಒಳ್ಳೇದು; ಆದರೆ ಆ ಅರ್ಧ ರುಪಾಯಿ ನೀನು ಖರ್ಚು ಮಾಡುವಿಯೋ? ಇಟ್ಟು ಕೊಳ್ಳುವಿಯೋ?

ರೊಬ. ಹೀಗೆ ಯಾಕೆ ಹೇಳುತ್ತೀ? ನಾನು ನಿಶ್ಚಯವಾಗಿ ಅದನ್ನು ಪ್ರಯೋಜನ ಮಾಡುವೆನು. ಅದು ಇಟ್ಟುಕೊಂಡರೆ, ಉಪಯೋಗವೇನು? ನನಗೆ ಹೇಳು.

ಆರ್ಥ. ಖರ್ಚು ಮಾಡುವಿ, ಖರೆ; ಇದು ನನಗೆ ತಿಳಿದದೆ. ಆದರೆ ಏನು ತೆಕ್ಕೊಳ್ಳುವಿ? ಹೇಳು. ನಿನಗೆ ಯಾವ ಪದಾರ್ಥದ ಮೇಲೆ ಅಪೇಕ್ಷೆ ಉಂಟು?

ರೊಬ. ಯಾವ ಪದಾರ್ಥ ಬೇಕೋ ನಾನರಿಯೆ; ಆದರೆ ಪೇಟೆಗೆ ಹೋದ ಮೇಲೆ ತಿಳಿಯುವದು. ಅಲ್ಲಿ ಹೋಗಿ ಕ್ಷಣ ಮಾತ್ರ ನಿಂತರೆ, ಸಾವಿರ ಸಾವಿರ ಪದಾರ್ಥಗಳು ನನಗೆ ಬೇಕೆಂಬುವ ಹಾಗಾಗುವದು.

ಆರ್ಥ. ಹಾಗಾದರೆ ನಾನು ಹೇಳುತ್ತೇನೆ, ಕೇಳು; ಪೇ

ಟೆಗೆ ಹೋಗುವದೇ ಬೇಡ; ಏನಂದರೆ, ಅರ್ಧ ರೂಪಾಯಿಗೆ ಒಳ್ಳೇದಾಗಿರುವ ಒಂದೇ ವಸ್ತು ಶಿಕ್ಕುವದು.

ರೊಬ. ಪೇಟೆಗೆ ಹೋದರೆ, ನನಗೆ ಶಿಕ್ಕುವದೋ? ಇಲ್ಲವೋ? ಶಿಕ್ಕಿದ್ದು ತೆಕ್ಕೊಂಡು, ಆ ಮೇಲೆ ಬೇರೆ ಎಲ್ಲಾ ಪದಾರ್ಥಗಳನ್ನು ಸುಮ್ಮನೆ ಕಣ್ಣಾರೆ ಕಂಡು ಬರ ಬಹುದಲ್ಲ; ಅದು ಒಳ್ಳೇದಲ್ಲವೋ?

ಆರ್ಥ. ಹೌದು, ಒಳ್ಳೇದೇ ಸರಿ. ಮತ್ತು ನಿನಗೆ ಅವಶ್ಯವಿದ್ದ ಪದಾರ್ಥ ಶಿಕ್ಕಿದರೆ, ಬಹಳ ಒಳ್ಳೇದು; ಆದರೆ ಅಂಥಾ ಪದಾರ್ಥವು ದೃಷ್ಟಿಗೆ ಬೀಳುವದೋ ಏನೋ? ತಿಳಿಯದು.

ರೊಬ. ಬೇಕಾದ ಪದಾರ್ಥವು ದೃಷ್ಟಿಗೆ ಬೀಳಲೇ ಬೀಳುವದು. ಈ ವಿಷಯದಲ್ಲಿ ಏನೂ ಸಂಶಯವಿಲ್ಲ. ಏನಾದರೂ ಉಪಯೋಗವಾಗುವ ಪದಾರ್ಥ ಕೊಂಡು ಕೊಳ್ಳ ಬೇಕೆಂದು ಹೇಳುತ್ತೀ. ಒಂದು ವೇಳೆ ಮೊಚ್ಚೆಜೋಡು ಕೊಂಡು ಕೊಳ್ಳ ಬೇಕೆಂದು, ಹೇಳುವಿ; ಇಲ್ಲವೆ ಮೊದಲನೇ ಅಕ್ಷರ ಮಾಲೆಯ ಪುಸ್ತಕವನ್ನು ತೆಕೊಳ್ಳ ಬೇಕೆಂದು, ನನಗೆ ಹೇಳುವಿ. ನಿನಗೆ ಯಾರಾದರೂ ಏನು ತೆಕ್ಕೊಳ್ಳುವಿ? ಎಂದು ಕೇಳಿದರೆ, ನೀನು ಉತ್ತರ ಕೊಡ ತಕ್ಕದ್ದು ಏನಂದರೆ: ನಾನು ಶಲ್ಯ

ತೆಗದು ಕೊಳ್ಳುವೆನು, ಇಲ್ಲವೆ ಧಾನ್ಯಕಾಳು ಕೊಂಡು ಕೊಳ್ಳುವೆನು ಹೊರತು, ವ್ಯರ್ಥವಾಗಿ ಹಣ ಖರ್ಚು ಮಾಡೆನು.

ಆರ್ಥ. ರೊಬರ್ತನೇ, ನೀನು ಹೇಳುವ ಪದಾರ್ಥವನ್ನು ನನಗೆ ಅವಶ್ಯವಿದ್ದರೆ ತೆಕ್ಕೊಳ್ಳುವೆನು; ಆದರೆ ನನಗೆ ಯಾವದೊಂದು ಪದಾರ್ಥವು ಬೇಡವೆಂದು ಕಾಣುತ್ತದೆ.

ರೊಬ. ನಿನಗೆ ಸದ್ಯಕ್ಕೇನೂ ಬೇಡವಾದರೆ, ನೀನು ಆ ಹಣವನ್ನು ನಿನ್ನ ತಂದೆಗೆ ತಿರುಗಿ ಕೊಡುವಿಯೋ?

ಆರ್ಥ. ಇಲ್ಲ, ತಿರುಗಿ ಕೊಡುವದಾದರೆ, ನಿನಗೆ ಕೊಡುವದು ಅದಕ್ಕಿಂತ ಒಳ್ಳೇದಲ್ಲವೋ? ಹಿಂದಕ್ಕೆ ಕೊಡುವದು ತಂದೆಗೆ ಕರಕರೆಯಾಗುವದು. ಆದ ಕಾರಣ ಅರ್ಧ ರೂಪಾಯಿ ನನ್ನ ಕೈಯಲ್ಲಿ ಇಟ್ಟು ಕೊಳ್ಳುವ ಯೋಚನೆಯುಂಟು; ಇನ್ನುಮುಂದೆ ಒಂದು ವೇಳ್ಯ ನನಗೆ ಅವಶ್ಯವಿದ್ದ ಪದಾಥರ್ವನ್ನುತೆಗದು ಕೊಳ್ಳುವದಕ್ಕೆ ಅದು ಉಪಯೋಗಕ್ಕೆ ಬರುವದು.

ರೊಬ. ನೀನು ಮುಂದಕ್ಕೆ ಕೃಪಣನಾಗುವಿ ಎಂದು ನನಗೆ ಈಗಲೇ ತಿಳಿಯುತ್ತದೆ.

ಆರ್ಥ. ಕೃಪಣನು ಹ್ಯಾಗಿರುತ್ತಾನೆ? ಅವನು ಹ್ಯಾಗೆ ನಡಕೊಳ್ಳುತ್ತಾನೆ? ಅದು ನನಗೆ ತಿಳಿಯದು, ಹೇಳು.

ರೊಬ. ಕೃಪಣ ಅಂದರೆ ಹಣದ ಮೇಲೆ ಪ್ರೀತಿ ಇಡುವ ಲೋಭಿಯಾದ ಮನುಷ್ಯನು. ಅಂಥವನು ಲೋಕದಲ್ಲಿರುವ ಸಕಲ ಪದಾರ್ಥಗಳಿಂತ ಧನವೇ ತನಗೆ ಉತ್ತಮವಾಗಿ ಕಾಣುತ್ತದೆ ಎಂದು ಹೇಳುತ್ತಾನೆ. ಒಂದು ಕಾಸು ಕೊಟ್ಟು ಉಪಯೋಗ ಪಡೆಯುವದಕ್ಕಿಂತ ಉಪವಾಸ ಮಾಡಿ ಸಾಯುವದೇ ಅವನಿಗೆ ಒಳ್ಳೇದಾಗಿ ಕಾಣುವದು. ಇದೇ ಲೋಭಿಯ ಗುಣವಾಗಿದೆ; ನೀನು ಸಹಾ ಹಾಗೆಯೇ ಆಗುವಿ ಎಂದು ನನಗೆ ಕಾಣುತ್ತದೆ. ಆದರೆ ಅಗೋ, ಅತ್ತ ಕಡೆಯಿಂದ ಒಂದು ದುಃಖದ ಸ್ವರ ಕೇಳುತ್ತದೆ, ಅದೇನು?

ಅಷ್ಟರಲ್ಲಿ ಒಬ್ಬ ಸಣ್ಣ ಹುಡುಗಿಯು ಅತ್ತು ಕೊಂಡು ಬರುವದನ್ನು ರೊಬರ್ತನು ನೋಡಿ, ಅವಳಿಗೆ—ಹುಡುಗಿಯೇ, ನಿನಗೇನಾಯಿತು? ಯಾಕೆ ಅಳುತ್ತೀ?

ಹುಡುಗಿ. ನನ್ನ ಕೈಯಲ್ಲಿ ಒಂದು ರೂಪಾಯಿ ಇತ್ತು, ಅದು ನನ್ನ ಕೈಯಿಂದ ಬಿದ್ದು ಹೋಯಿತು. ಈಗ ನಾನೇನು ಮಾಡಲಿ! ನನ್ನ ತಂದೆ ತಾಯಿಗಳು ಬಡವರು; ಅವರ ಕೈಯಲ್ಲಿ ಇನ್ನೂ ಏನೂ ಹಣವಿಲ್ಲ. ನಾವು ಈಗ ಉಪವಾಸದಿಂದ ಸಾಯ ಬೇಕಾಯಿತು. ಅಯ್ಯೋ, ನಮಗೆ ಎಂಥಾ ಕಷ್ಟ ಬಂತು!

ಆರ್ಥ. ಎಲೇ ಹುಡುಗಿ, ಹೀಗೆ ಅಳ ಬೇಡ, ನಿನಗೆ ರೂಪಾಯಿ ಏನು ಕೊಂಡು ಕೊಳ್ಳಲಿಕ್ಕೆ ಬೇಕಾಗಿತ್ತು? ಹೇಳು.

ಹುಡುಗಿ. ಅದರಿಂದ ಕಾಳು ತೆಗದು ಕೊಳ್ಳ ಬೇಕಾಗಿತ್ತು; ಮತ್ತೇನು ತೆಗದು ಕೊಳ್ಳ ಬೇಕು? ಅಯ್ಯೋ, ಎಲ್ಲಾ ಹೋಯಿತು! ತಂದೆ ತಾಯಿಗಳು ಉಪವಾಸದಿಂದ ಸಾಯ ಬೇಕು, ಬೇರೆ ಉಪಾಯವೇನಿಲ್ಲವಲ್ಲ! ನಾನೇನು ಮಾಡಲಿ! ನಾನೇನು ಮಾಡಲಿ!

ಆರ್ಥ. ಇಲ್ಲ ಹುಡುಗಿ, ನಿನ್ನ ತಂದೆ ತಾಯಿಗಳು ಹಶುವಿನಿಂದ ಸಾಯರು; ನನ್ನ ಕೈಯಲ್ಲಿ ಅರ್ಧ ರೂಪಾಯಿ ಉಂಟು; ಇಗೋ, ನಿನಗೆ ಅವಶ್ಯ ಬೇಕಾದದ್ದು ಕೊಂಡು ಕೊಳ್ಳ ಬಹುದು; ನನ್ನ ಕೈಯಲ್ಲಿ ಹೆಚ್ಚು ಇದ್ದರೆ, ನಿನಗೆ ಕೊಡುತ್ತಿದ್ದೆ, ಆದರೆ ನನಗೆ ಹೆಚ್ಚು ಏನೂ ಇಲ್ಲ.

ಹುಡುಗಿ. ಅಪ್ಪನವರೇ, ನೀವು ಬಡವಳಾದ ನನ್ನ ಮೇಲೆ ಬಹಳ ಕನಿಕರ ತೋರಿಸುತ್ತೀರಿ. ನಿಮ್ಮ ಉಪಕಾರ ನನ್ನ ಮೇಲೆ ಬಹಳವಾಯಿತು. ನನ್ನ ಬಡ ತಾಯಿ ತಂದೆಗಳನ್ನು ಮರಣದಿಂದ ರಕ್ಷಿಸಿ ಬದುಕ ಮಾಡಿದ್ಧೀರಿ. ಅವರು ರೋಗದಲ್ಲಿ ಹೊರಳುತ್ತಾರೆ; ಅವರ ಪ್ರಾಣ ಕಾಪಾಡಿದ್ಧೀರಿ. ನಿ

ಮ್ಮ ಉಪಕಾರ ನಾನು ಹ್ಯಾಗೆ ಮರಿಯಲಿ! ನನ್ನ ದುಃಖವನ್ನು ಪರಿಹಾರ ಮಾಡಿದ್ಧೀರಿ. ನಾನು ನಿಮ್ಮ ಕಾಲಿಗೆ ಬೀಳುತ್ತೇನೆ.

ರೊಬ. ಎಲೇ ಹುಡುಗಿ, ಇಗೋ, ನನ್ನ ಕೈಯಲ್ಲಿಯೂ ಅರ್ಧ ರೂಪಾಯಿ ಉಂಟು, ಅದು ನಿನಗೆ ಕೊಡುತ್ತೇನೆ; ಆಗ್ಯೆ ನೀನು ಕಳಕೊಂಡ ರೂಪಾಯಿ ನಿನಗೆ ಶಿಕ್ಕಿದ ಹಾಗಾಯಿತು. ಸಂತೋಷ ಪಟ್ಟು ಹೋಗು, ಮತ್ತು ನಿನ್ನ ತಾಯಿ ತಂದೆಗಳು ಕೊಂಡುಕೊಳ್ಳ ಬೇಕೆಂದು, ನಿನಗೆ ಹೇಳಿದ ಪದಾರ್ಥವನ್ನು ತೆಗದು ಕೊಂಡು ಹೋಗಿ, ಅವರನ್ನು ಪರಾಂಬರಿಸು.

ಹೀಗೆ ರೊಬರ್ತನು ಹೇಳಿದ ಮೇಲೆ ಹುಡುಗಿಯು ದಾರಿ ಹಿಡಿದು ಮುಂದೆ ಹೋದಳು. ತರುವಾಯ ರೊಬರ್ತನು ಆರ್ಥರನಿಗೆ—ನನ್ನ ಪ್ರಿಯ ಸ್ನೇಹಿತನೇ, ನಿನಗೂ ಲೋಭಿಗೂ ಬಹಳ ವ್ಯತ್ಯಾಸ ಉಂಟು ಎಂಬುವದು ಈಗ ನನಗೆ ತಿಳಿಯಿತು. ನಾನು ನಿನ್ನ ಗುಣವನ್ನು ತಪ್ಪಾಗಿ ಗ್ರಹಿಸಿ ಕೊಂಡೆನು. ಈ ಬಡ ಹುಡುಗಿಗೆ ಅರ್ಧ ರೂಪಾಯಿ ಕೊಟ್ಟದರಿಂದ ನನ್ನ ಮನಸ್ಸಿನಲ್ಲಿ ಬಹಳ ಉಲ್ಲಾಸ ಹುಟ್ಟಿತು. ನಾನು ಪೇಟೆಗೆ ಹೋದದ್ದಾದರೆ, ಇಷ್ಟು ಸಂತೋಷವು ನನಗೆ ಪ್ರಾಪ್ತಿ ಆಗಲಾರದಿತ್ತು, ಅಂದನು.

ಪ್ರಿಯ ಹುಡುಗರೇ, ಇದರಿಂದ ನೀವು ತಿಳಿಯ ತಕ್ಕದ್ದೇನಂದರೆ: ಲೋಭತ್ವವು ಪೋಲುವೆಚ್ಚವು ಈ ಎರಡೂ ಕೆಟ್ಟದ್ದು. ಹಣದ ಮೇಲೆ ಅತಿ ಪ್ರೀತಿ ಇಟ್ಟು ಅದನ್ನು ಕಟ್ಟಿಡುವವನು ಪಾಪಿಯಾಗಿದ್ಧಾನೆ; ಹ್ಯಾಗೂ ವ್ಯರ್ಥ ಖರ್ಚು ಮಾಡಿ, ಅವಶ್ಯವಿಲ್ಲದ ವಸ್ತುಗಳನ್ನು ಕೊಂಡುಕೊಳ್ಳುವ ದುಂದುಗಾರನು ಸಹಾ ಪಾಪಿಯಾಗಿದ್ಧಾನೆ. ನಮ್ಮ ಕೈಯಲ್ಲಿ ಎರಡು ದುಡ್ಡು ಇರುವಾಗ್ಯೆ ಯಾರೊಬ್ಬ ಭಿಕ್ಷಗಾರನು ಹಶಿದು ಬಂದರೆ, ಅವನಿಗೆ ಒಂದು ದುಡ್ಡು ಕೊಡ ಬೇಕು; ಏನಂದರೆ: "ನಿನ್ನ ಹಾಗೆಯೇ ನಿನ್ನ ನೆರೆಯವನನ್ನು (ಬೇರೆಯವರನ್ನು) ಪ್ರೀತಿ ಮಾಡು" ಎಂಬ ದೇವರಾಜ್ಞೆ ಉಂಟು.

ಒಬ್ಬನ ಕೈಯಲ್ಲಿ ಹಣವಿದ್ದರೆ, ಅದು ತನ್ನ ಹಣವಾಗಿರುವದರಿಂದ ತನ್ನ ಮನಸೋ ಇಚ್ಛೆ ಪ್ರಕಾರ ವೆಚ್ಚ ಮಾಡಬಹುದೆಂದು ನೆನಸ ಬಾರದು. ಆದರೆ ಅದು ದೇವರು ಕೊಟ್ಟದ್ದು, ಅದನ್ನು ನಾನು ಹ್ಯಾಗೆ ವೆಚ್ಚ ಮಾಡಿದೆ? ಎಂದು ದೇವರು ಆದರ ಲೆಖ್ಖ ಕೇಳುವನೆಂದು, ಹಣ ಇದ್ದವನು ತಿಳ ಕೊಳ್ಳ ಬೇಕು. ಬಡವರ ಪೋಷಣೆಗಾಗಿ ತನ್ನ ಹಣವನ್ನು ವೆಚ್ಚ ಮಾಡುವವನು ಭಾಗ್ಯವಂತನು.

---

## ೮. ದಾರಿ ತಪ್ಪಿದ ಹುಡುಗ.

ಒಂದು ದಿವಸ ಒಬ್ಬ ಒಕ್ಕಲಿಗನು ತನ್ನ ಮಗನನ್ನು ಕರದು—ಮಗನೇ, ನನ್ನ ಬಳಿಗೆ ಬಂದರೆ, ನನ್ನ ಚಿಕ್ಕತನದಲ್ಲಿ ಸಂಭವಿಸಿದ ಒಂದು ಕಾರ್ಯವನ್ನು ಕುರಿತು ನಿನಗೆ ಹೇಳುತ್ತೇನೆ, ಅಂದನು. ಇದನ್ನು ಕೇಳುತ್ತಲೇ ಮಗನು, ತಂದೆ ಏನು ಹೇಳುವನೋ? ಕೇಳುವಾ ಎಂದು, ಸಮೀಪಕ್ಕೆ ಬಂದನು. ತರುವಾಯ ತಂದೆಯು ತನ್ನ ಚಿಕ್ಕತನದ ವೃತ್ತಾಂತವನ್ನು ಹೇಳಲಾರಂಭಿಸಿದನು: ನನ್ನ ಮಗನೇ, ನಾನು ಸಹಾ ಮುಂಚೆ ನಿನ್ನ ಹಾಗೆಯೇ ಹುಡುಗನಾಗಿದ್ದೆ; ಆದರೆ ಈಗ ನಾನು ಹುಡುಗನಲ್ಲ. ನನ್ನ ಬಾಲ್ಯವು ಹೋಗಿ ಬಹು ಕಾಲವಾಯಿತು, ಅನೇಕ ಮಳೆಗಾಲಗಳು ದಾಟಿದವು, ಅನೇಕ ಬೇಸಿಗೇ ದಿವಸಗಳು ಕಳೆದವು, ನನ್ನ ಚಿಕ್ಕತನದ ಸ್ನೇಹಿತರು ಸಹಾ ಅನೇಕರು ಸತ್ತು ಹೋದರು. ಈಗ ನಾನು ಮುದುಕನಾಗಿದ್ಧೇನೆ. ಇದು ಜನರಿಗೆ ಸ್ಪಷ್ಟವಾಗಿ ಕಾಣುತ್ತದೆ. ಇದಲ್ಲದೆ ನನಗೆ ಮರಣವು ಬೇಗ ಬರುವದು; ಆದರೆ ಅದು ಯಾವಾಗ ಬರುವದೆಂದು ನನಗೆ ತಿಳಿಯದು; ಆದದರಿಂದ ಆ ವಿಷಯದಲ್ಲಿ ನಾನು ಬಹಳವಾಗಿ ಕಾಯುತ್ತೇನೆ. ಮ

ಗನೇ, ನಾನು ಹುಡುಗನಾಗಿರುವಾಗ್ಯೆ, ನನ್ನ ತಂದೆಯು ಒಂದು ದಿವಸ ಒಂದು ಕೆಲಸದ ಸಲವಾಗಿ ನಾಲ್ಕು ಹರದಾರಿ ದೂರವಿರುವ ಒಬ್ಬ ಒಕ್ಕಲಿಗನ ಮನೆಗೆ ನನ್ನನ್ನು ಕಳುಹಿಸಿಕೊಟ್ಟನು. ನಾನು ಹೊರಡುವ ಮುಂಚೆ ತಂದೆಯು ನನ್ನನ್ನು ಕರೆದು—ಮಗನೇ, ಇಲ್ಲಿಂದ ನೆಟ್ಟಗೆ ರಾಜಮಾರ್ಗವಾಗಿ ಹೋಗು; ಇಲ್ಲಿಂದ ಒಂದು ಹರದಾರೀ ಮೇಲೆ ಗುರ್ತು ಮಾಡಿ ಅದೆ, ಅಲ್ಲಿ ಮಾರ್ಗ ಬಿಡದೆ ನೆಟ್ಟಗೆ ಮುಂದೆ ಹೋಗು; ತರುವಾಯ ಎರಡನೇ ಹರದಾರಿಯ ಗುರ್ತು ಶಿಕ್ಕುವದು; ಅದರ ಎದುರಾಗಿ ಒಂದು ಬಂಗಲೆ ಕಾಣುವಿ; ಅದರ ಎಡ ಕಡೆಯಲ್ಲಿರುವ ಮಾರ್ಗವನ್ನು ಹಿಡಿದು ಮುಂದಕ್ಕೆ ನಡಿ; ಆ ದಾರಿಯು ಆ ಒಕ್ಕಲಿಗನ ಮನೆಗೆ ನೆಟ್ಟಗೆ ಹೋಗುತ್ತದೆ. ಅದೇ ದಾರಿಯನ್ನು ಜಾಗ್ರತೆಯಿಂದ ಹಿಡ ಕೊಂಡು ನಡಿ; ಅದು ತಪ್ಪಿ ಹೋದರೆ, ಬಹಳ ಕಷ್ಟ ನಷ್ಟವಾದೀತು; ನೋಡಿಕೋ, ಅಂದನು.

ತಂದೆಯು ಇಷ್ಟು ಹೇಳಿದ ಮೇಲೆ, ಮಗನೇ, ನಾನು ಮಾಡಿದ್ದೇನೆಂದು ಕೇಳು. ನಾನು ಆಗ್ಯಾಗ್ಯೆ ದಾರಿಯನ್ನು ಬಿಟ್ಟು ಅಡವಿಯಲ್ಲಿ ದೃಷ್ಟಿಗೆ ಬಿದ್ದ ಹಣ್ಣುಗಳನ್ನು ತಿನ್ನುವದು ನನಗೆ ಒಳ್ಳೇದಾಗಿ ಕಂಡಿತು. ನಾನು ಹುಡುಗನಾಗಿದ್ದದ

ರಿಂದ, ನನ್ನ ಹುಡುಗಾಟಿಕೆಯೂ ನನ್ನ ಆಟದ ಚಿತ್ತವೂ ತಂದೆ ಹೇಳಿದ ಮಾತನ್ನು ಲಕ್ಷ್ಯಕ್ಕೆ ತರಗೊಡಲಿಲ್ಲ. ನಾನು ಹೊರಟು ಹೋಗಿ, ಎರಡು ಹರದಾರೀ ಮೇಲೆ ತಂದೆ ಹೇಳಿದ ಗುರುತಿಗೆ ಬಂದೆನು; ಮತ್ತು ತಂದೆ ಸೂಚಿಸಿದ ದೊಡ್ಡ ಬಂಗ್ಲೆಯು ಶಿಕ್ಕಿತು; ಅದರ ಸಮೀಪ ಒಂದು ಎಡಗಡೆಗೂ ಒಂದು ಬಲಗಡೆಗೂ ಹೋಗುವ ಎರಡು ದಾರಿಗಳನ್ನು ಸಹಾ ಕಂಡೆನು. ಅಲ್ಲಿ ಸ್ವಲ್ಪ ಹೊತ್ತು ಆಲೋಚನೆ ಮಾಡಿ, ತಂದೆ ಹೇಳಿದ ಮಾರ್ಗವು ಯಾವದೆಂದು ತಿಳಿಯದೆ, ಬಲಗಡೆ ದಾರಿಯನ್ನು ಹಿಡಿದು ಮುಂದೆ ನಡದು ಹೋದೆನು. ಹೀಗೆ ನಾನು ದಾರಿ ತಪ್ಪಿದವನಾಗಿ, ಒಂದು ಸಣ್ಣ ಮನೆ ಕಡೆಗೆ ಹೋದೆ; ಅಲ್ಲಿ ಒಂದು ನಾಯಿಯು ನನ್ನನ್ನು ಬೆದರಿಸಿ ಕೊಂಡು ಬಂತು. ಅದರ ಭಯದಿಂದ ನಾನು ಓಡುತ್ತಾ ಹೋಗುವಾಗ್ಯೆ, ಒಂದು ಕೆಸರಿನ ಹೊಂಡದಲ್ಲಿ ಬಿದ್ದೆ. ಅದರಿಂದೆದ್ದು ಮುಂದೆ ಓಡುವಾಗ್ಯೆ, ದಾರಿಯ ಬದಿಯಲ್ಲಿದ್ದ ಮುಳ್ಳಿನ ಬೇಲಿಯಿಂದ ನನ್ನ ವಸ್ತ್ರಗಳೆಲ್ಲಾ ಹರಿದು ಹೋದವು. ನಾಯಿಯು ಹಿಂದಕ್ಕೆ ಹೋದ ಮೇಲೆ, ಅದು ತಿರುಗಿ ಬಂದರೆ, ಅದಕ್ಕೆ ಭಯ ತೋರಿಸುವ ಹಾಗೆ ಒಂದು ಕೋಲು ಮುರಿದು ಕೊಳ್ಳುವದಕ್ಕೆ ಪ್ರಯತ್ನ ಮಾಡಿದೆ. ಅದು ಮುರಿಯುವಾಗ್ಯೆ

ಬೆರಳುಗಳಿಗೆ ಬಹಳ ಮುಳ್ಳುಗಳು ಊರಿದವು. ಹೀಗೆ ನಾನು ಬಹಳ ದುರವಸ್ಥೆ ಪಟ್ಟು, ಅಳಲಿ ಬಳಲಿ ಮುಂದೆ ಮುಂದೆ ನಡದು ಹೋದೆ; ಆದಾಗ್ಯೂ ನನಗೆ ದೊರಕ ಬೇಕಾದ ಒಕ್ಕಲಿಗನ ಮನೆ ಶಿಕ್ಕಲೇ ಇಲ್ಲ. ನಾನು ದಾರಿ ತಪ್ಪಿ ಹೋದದರಿಂದ ಅದು ಶಿಕ್ಕುವದು ಹ್ಯಾಗೆ? ನನ್ನ ಪ್ರಯತ್ನವೆಲ್ಲಾ ವ್ಯರ್ಥವಾಯಿತು.

ಆಗ್ಯೆ ಸಮೀಪದ ಹೊಲದಲ್ಲಿ ಒಬ್ಬ ಒಕ್ಕಲಿಗನು ಭೂಮಿಯನ್ನು ಹಸನು ಮಾಡುತ್ತಿದ್ದನು. ನಾನು ಅವನ ಬಳಿಗೆ ಹೋಗಿ, ತಂದೆಯು ಹೇಳಿದ ಆ ಒಕ್ಕಲಿಗನ ಮನೆಗೆ ಹೋಗುವ ದಾರಿ ಯಾವದೆಂದು ಕೇಳಲು, ಅವನು ನನಗೆ—ಎಲೇ ಹುಡುಗನೇ, ನೀನು ದಾರಿ ತಪ್ಪಿ ಬಂದಿದ್ಧೀ, ಆ ಒಕ್ಕಲಿಗನ ಮನೆಯು ನಿನಗೆ ಇನ್ನೂ ಶಿಕ್ಕದೆ ಇರುವದು ಆಶ್ಚರ್ಯವಲ್ಲ; ಅವನ ಮನೆಯು ಬಹಳ ದೂರ ಉಳಿಯಿತು, ಅಂದನು. ಅದನ್ನು ಕೇಳಿ ನನ್ನ ಮನಸ್ಸು ಅಗದಿ ಕುಂದಿ ಹೋಯಿತು, ಮತ್ತು ಬಹಳ ದುಃಖವು ನನ್ನನ್ನು ಆವರಿಸಿ ಕೊಂಡಿತು. ನಾನು ತಂದೆಯ ಮಾತನ್ನು ಚನ್ನಾಗಿ ಗ್ರಹಿಸಿ ಕೊಂಡಿದ್ದಾದರೆ, ದಾರಿ ತಪ್ಪಿ ಹೋಗಿ ಇಂಥಾ ಕಷ್ಟವು ನನ್ನ ಮೇಲೆ ಬೀಳುತ್ತಿದ್ದಿಲ್ಲ. ಹೀಗೆ ನಾನು ದುಃಖ ಭರಿತನಾಗಿ ಹಿಂದಕ್ಕೆ ಬಂದು,

ನಿಜವಾದ ದಾರಿಯನ್ನು ಕಂಡುಕೊಂಡು, ಅದು ಇನ್ನು ಮುಂದೆ ತಪ್ಪಿ ಹೋಗಲಾರೆನೆಂದು ನೆನಸಿದೆನು; ಮತ್ತು ಹಾಗೆಯೇ ಆ ದಾರಿಯನ್ನು ಹಿಡಿದು ಮುಂದಕ್ಕೆ ಹೋಗಲು, ಆ ಒಕ್ಕಲಿಗನ ಮನೆಯು ದೊರಕಿತು. ಅವನ ಮನೆಗೆ ಶೇರಿದ ಮೇಲೆ ನನ್ನ ಕೆಲಸವನ್ನು ತೀರಿಸಿ ಹಿಂದಕ್ಕೆ ಬರುವಾಗ್ಯೆ, ದಾರಿಯಲ್ಲಿ ನನ್ನ ತಪ್ಪಿಗಾಗಿ ಬಹಳ ಮನಸ್ಥಾಪ ಪಟ್ಟು, ಮುಂದೆ ದಾರಿ ತಪ್ಪಿ ಹೋಗದ ಹಾಗೆ ಎಚ್ಚರಿಕೆಯಿಂದ ನಡೆದೆನು.

ಮನೆಗೆ ಬಂದ ಮೇಲೆ, ತಂದೆಯು ಕೂಡಲೇ ನನ್ನನ್ನು ಕರದು—ಮಗನೇ, ದಾರಿ ತಪ್ಪಿ ಹಿಂದೆ ಮುಂದೆ ಅಲಿಯುತ್ತಾ ಇದ್ಧಿಯೋ? ಇಷ್ಟು ಹೊತ್ತು ಏನು ಮಾಡುತ್ತಿದ್ದಿ? ಬೇರೆ ಜನರು ಇಷ್ಟು ಹೊತ್ತಿನೊಳಗೆ ಆ ಒಕ್ಕಲಿಗನ ಮನೆಗೆ ಎರಡು ಸರ್ತಿ ಹೋಗಿ ಬರುವರಲ್ಲ. ನಿನ್ನ ಪಾದರಕ್ಷಕ್ಕೆ ಕೆಸರು ತಾಗಿದೆ, ನಿನ್ನ ಅಂಗಿ ಹರದು ಹೋಗಿದೆ. ಹೀಗ್ಯಾಕಾಯಿತೆಂದು, ಕೇಳಿದನು. ಆ ಮೇಲೆ ನಾನು ನಡದ ಸಂಗತಿಗಳನ್ನೆಲ್ಲಾ ತಿಳಿಸಿ—ಅಪ್ಪಾ, ನಾನು ಕೇವಲ ಮೂರ್ಖನಾಗಿ ನಿನ್ನ ಮಾತನ್ನು ಗ್ರಹಿಸದೆ ಹೋದ್ದರಿಂದ ಈ ಅವಸ್ಥೆಯು ನನಗೆ ಸಂಭವಿಸಿತು, ಅಂದೆನು.

ತರುವಾಯ ತಂದೆಯು ನನ್ನನ್ನು ಕರೆದು—ಮಗನೇ, ತಂ

ದೆಯ ಮಾತನ್ನು ಕೇಳದೆ ದಾರಿ ತಪ್ಪಿ ಹೋಗಿ, ಅದರಿಂದ ಬಹಳ ಕಷ್ಟ ಪಡುವವರು ಈ ಲೋಕದಲ್ಲಿ ಅನೇಕರಿದ್ದಾರೆ. ಲೋಕದಲ್ಲಿರುವ ಸರ್ವರಿಗೆ ಏಕ ಪ್ರಕಾರವಾಗಿ ಕೆಲಸವಿರುತ್ತದೆ; ನಿನ್ನ ಕೆಲಸದ ಹಾಗೆಯೇ ಅಂಬುವದಲ್ಲ, ಅಂದರೆ ದೇವರ ಬಳಿಗೆ ಹೋಗುವ ಮಾರ್ಗದಲ್ಲಿ ಎಲ್ಲರೂ ನಡಿಯುವ ಕೆಲಸ ಉಂಟು. ನಾವು ದಾರಿ ತಪ್ಪಿ ದುಃಖ ಪಡ ಬಾರದೆಂದು, ಧರ್ಮ ಮಾರ್ಗದ ವಿಷಯದಲ್ಲಿ ದೇವರ ವಾಕ್ಯದಲ್ಲಿ ಬಹಳ ಬರದದೆ. ಅದರಲ್ಲಿ ನಿಜ ಮಾರ್ಗದ ಕುರುಹುಗಳು ಸ್ಪಷ್ಟವಾಗಿ ವಿವರಿಸಿಯವೆ. ಯಾರು ಅವುಗಳನ್ನು ಹಿಡಿದು ನಡಕೊಳ್ಳುತ್ತಾರೋ, ಅವರಿಗೆ ಆ ಮಾರ್ಗವು ಶಿಕ್ಕುತ್ತದೆ. ಮತ್ತು ಯಾರು ಆ ಪ್ರಕಾರ ನಡಕೊಳ್ಳುವದಿಲ್ಲವೋ, ಅವರಿಗೆ ಬಹಳ ದುಃಖ ಪ್ರಾಪ್ತಿ ಆಗುತ್ತದೆ.

ಎಲೋ! ಮತಧರ್ಮದ ವಿಷಯದಲ್ಲಿ ದಾರಿ ತಪ್ಪಿ ಹೋಗುವದು ಮಹಾ ದುಃಖಕರವಾದದ್ದು. ಚಿಕ್ಕವರೂ ದೊಡ್ಡವರೂ ಮತಧರ್ಮದಲ್ಲಿ ನಡಿಯ ಬೇಕು. ದೇವರ ಶಾಸ್ತ್ರದಲ್ಲಿ ಬರದಿರುವದನ್ನು, ಹುಡುಗರಿಗೆ ಓದ ಬರುವ ಪರ್ಯಂತರ, ದೊಡ್ಡವರು ಹೇಳ ಬೇಕಾಗುತ್ತದೆ. ತಂದೆ ತಾಯಿಗಳು ಇತ್ಯಾದಿಯವರ ಕೆಲಸ ಏನಂದರೆ: ಮತ್ತೊಬ್ಬರಿಗೆ ಬೋಧಿ

ಸುವದು; ಆದ ಕಾರಣ ಅವರು ಬಹಳ ಎಚ್ಚರಿಕೆಯಿಂದ ಇರಬೇಕು; ಮತ್ತು ಬಹಳ ಆಲೋಚನೆ ಮಾಡಿ, ಮಕ್ಕಳಿಗೆ ಯಾವದು ತಕ್ಕದೋ ಅದನ್ನೇ ಬೋಧಿಸ ಬೇಕು. ಹುಡುಗರಿಗೆ ಒಳ್ಳೇ ಬೋಧನೆ ಕೊಡದಿದ್ದರೆ, ಅವರು ತಮ್ಮ ಸ್ವಭಾವದ ಪ್ರಕಾರ ನಡದು ಧರ್ಮಮಾರ್ಗವನ್ನು ತಪ್ಪಿ ಬಿಡುವರು. ಸಣ್ಣ ಹುಡುಗರು ದೇವರ ವಾಕ್ಯವನ್ನು ಓದಲಿಕ್ಕೆ ತಿಳಿದಾಗಲೇ ಅದರ ನೇಮಗಳಿಗೆ ಅನುಸರಿಸಿ ನಡಿಯ ಬೇಕು. ದೇವರ ಶಾಸ್ತ್ರವನ್ನು ಅಲಕ್ಷ್ಯ ಮಾಡಿ ನಡಿಯುವವರು ಕಠಿಣ ದುಃಖಕ್ಕೆ ಗುರಿಯಾಗುವರು. ದೇವರ ಮಾರ್ಗವನ್ನು ತಪ್ಪಿ ಹೋಗುವವರಿಗೆ ದುಃಖ, ಆಪತ್ತು, ಕ್ಲೇಶ, ನಿರಾಶೆ ಇತ್ಯಾದಿ ಕಷ್ಟಗಳು ಸಂಭವಿಸುತ್ತವೆ.

ತಂದೆ ತಾಯಿಗಳನ್ನು ಸನ್ಮಾನಿಸದೆ ಇರುವವನ ವಿಷಯದಲ್ಲಿ ಆಲೋಚಿಸಿ, ನೋಡು. ಅವನ ಗತಿ ಕಠಿಣವಾಗಿರುವದು. ಮತ್ತು ಅವನು ಅಘೋರ ದುಃಖವುಳ್ಳ ಮನುಷ್ಯನಾಗಿರುವನು. ಒಬ್ಬನು ಅವನಿಗೆ, ನಿನಗೆ ಈ ಅವಸ್ಥೆ ಯಾಕೆ ಆಯಿತೆಂದು ಕೇಳಿದರೆ, ಅವನು ತನಗೆ ವ್ಯಾಪಾರದಲ್ಲಿ ನಷ್ಟವಾದ್ದರಿಂದ ಹೀಗಾಯಿತೆಂದು, ಹೇಳುವನು. ಆದರೆ ಹಾಗಲ್ಲ; ಆಲಸ್ಯದಿಂದ ಕಾಲವನ್ನು ವ್ಯರ್ಥವಾಗಿ ಕಳಿ

ಯ ಬಾರದೆಂದು ದೇವರ ವಾಕ್ಯದಲ್ಲಿ ಬರದದೆ; ಮತ್ತು ತಂದೆ ತಾಯಿಗಳನ್ನು ಸನ್ಮಾನಿಸು ಎಂಬ ಇತ್ಯಾದಿ ದೇವರಾಜ್ಞೆಗಳನ್ನು ಅವನು ಲಕ್ಷ್ಯಕ್ಕೆ ತರಲಿಲ್ಲ. ಹಗಲೆಲ್ಲ ಆಲಸ್ಯದಿಂದ ಕಾಲ ಕಳದನು; ತಾಯಿ ತಂದೆಗಳ ಬುದ್ಧೀ ಮಾತು ಕೇಳದೆ ಹೋದನು. ಈ ಪ್ರಕಾರ ದೇವರಾಜ್ಞೆಗಳನ್ನು ಮಿಾರಿ ನಡದದರಿಂದ ಪಾಪ ಮಾಡಿ, ಪಾಪದ ದೆಸೆಯಿಂದ ಅವನಿಗೆ ಇಂಥಾ ಅವಸ್ಥೆ ಪ್ರಾಪ್ತಿ ಆಗುತ್ತದೆ. ತಂದೆ ತಾಯಿಗಳಿಗೆ ಅವಿಧೇಯನಾಗಿ ನಡದವನ ಅವಸ್ಥೆಯು ಬಹಳ ಕಠಿಣವಾಗಿದೆಂದು, ದೇವರ ವಾಕ್ಯದಲ್ಲಿ ಬರದದೆ. ಹ್ಯಾಗೆ ನಡಿಯ ಬೇಕೆಂದು ದೇವರ ವಾಕ್ಯವು ಸ್ಪಷ್ಟವಾಗಿ ತೋರಿಸುತ್ತದೆ. ಆದರೆ ದಾರಿ ತಪ್ಪಿ ಹೋಗುವವನು ದಾರಿ ತಪ್ಪುವದರಿಂದಲೇ ಕಠಿಣವಾದ ಅವಸ್ಥಿತಿಯನ್ನು ಅನುಭವಿಸುತ್ತಾನೆ. ಹ್ಯಾಗಂದರೆ, ಅವನ ಮುಖಚಿನ್ಹೆ ಎಷ್ಟು ಕೆಟ್ಟದ್ದು! ಅವನ ಶರೀರವು ಎಷ್ಟು ಬಲಹೀನವಾದದ್ದು! ದುರ್ದೈವದ ದೆಶೆಯಿಂದ ಅವನಿಗೆ ಇಂಥಾ ಅವಸ್ಥೆ ಆಯಿತೆಂದು, ನೆನಸ ಬಾರದು. ಸನ್ಮಾರ್ಗವನ್ನು ಬಿಟ್ಟು ನಡದರಿಂದಲೇ ಅವನಿಗೆ ಈ ಗತಿ ಆಯಿತೆಂದು ನೆನಸ ಬೇಕು. ದೇವರ ವಾಕ್ಯದ ಪ್ರಕಾರ ಅವನು ನಡಿಯುವದಿಲ್ಲ; ಅವನು ಮೃಗಗಳ ಹಾಗೆಯೇ ತನ್ನ

ಮಾಂಸದ ಇಛ್ಛೆಗಳನ್ನು ತೃಪ್ತಿ ಮಾಡ ಪ್ರಯತ್ನ ಮಾಡು ತ್ತಾನೆ; ಮತ್ತು ಬುದ್ಧಿ ಕಳಕೊಂಡವನಾಗಿ ಪಶುವಿನಂತೆ ಒ ಳ್ಳೇದನ್ನೂ ಕೆಟ್ಟದ್ದನ್ನೂ ಗ್ರಹಿಸಿ ಕೊಳ್ಳುವದಿಲ್ಲ. ನೋಡಿರಿ! ಅವನು ಎಂಥಾ ಕಠಿಣ ಸ್ಥಿತಿಯಲ್ಲಿ ಶೇರುತ್ತಾನೆ! ಇದೆಲ್ಲಾ ಅ ವನಿಗೆ ದೇವರ ಮಾರ್ಗದಿಂದ ಅಗಲಿ ಹೋಗುವದರಿಂದ ಸಂಭವಿಸುತ್ತದೆ. ಕಳ್ಳತನ ಮಾಡುವವನ ಸ್ಥಿತಿಯು ಇದೇ. ನೋಡಿರಿ, ಅವನು ಕಾಲಿಗೆ ಬೇಡಿ ಹಾಕಲ್ಪಟ್ಟವನಾಗಿ, ಶೆರೆ ಮನೆಯಲ್ಲಿ ಬೀಳುತ್ತಾನೆ. ಅಲ್ಲಿ ದುಃಖ ಕಷ್ಟವೆಂಬದು ಅ ವನ ಪಾಲಾಗಿದೆ. ಇಂಥಾ ಅವಸ್ಥೆಯು ಅವನಿಗೆ ಪ್ರಾಪ್ತಿ ಆಗುವದು; ಯಾಕಂದರೆ: ದೇವರಾಜ್ಞೆಗಳ ಪ್ರಕಾರ ನಡಕೊ ಳ್ಳದೆ ಹೋಗುವದರಿಂದಲೇ. ಪರಿಶುದ್ಧನಾದ ದೇವರ ವಾಕ್ಯ ದಲ್ಲಿ ಬರದದ್ದೇನಂದರೆ: ಕಳ್ಳತನ ಮಾಡ ಬೇಡ, ಮೋಸ ಮಾಡ ಬೇಡ, ಮತ್ತೊಬ್ಬರ ಒಡವೆಯನ್ನು ಆಶಿಸ ಬೇಡ, ನೆಟ್ಟಾನ ಮಾರ್ಗದಲ್ಲಿ ನಡಿ ಎಂಬ ಆಜ್ಞೆಗಳು ಚಿಕ್ಕವರಿಗೂ ದೊಡ್ಡವರಿಗೂ ಕೊಡಲ್ಪಟ್ಟವೆ. ಈ ಆಜ್ಞೆಗಳನ್ನು ಕೈಕೊ ಳ್ಳದೆ ನಡಿಯುವವನು ದೇವರ ಕೃಪೆಯನ್ನು ಕಳ ಕೊಂಡು, ಆತನ ಉಗ್ರ ರೋಷಕ್ಕೆ ಗುರಿ ಆಗುತ್ತಾನೆ. ಈ ಪ್ರಕಾರ ದೇವರ ಮಾರ್ಗಕ್ಕೆ ವಿರೋಧವಾಗಿ ನಡಿಯುವವನು, ಪ

ರಲೋಕಕ್ಕೆ ಹೋಗುವ ನಿತ್ಯಾನಂದದ ಮಾರ್ಗವನ್ನು ಬಿಟ್ಟು ನಿತ್ಯಾಗ್ನಿಗೆ ಹೋಗುವ ಮಾರ್ಗವನ್ನು ಹಿಡಿದವನಾಗುತ್ತಾನೆ.

ತಂದೆ ತಾಯಿಗಳನ್ನು ಸನ್ಮಾನಿಸದೆ ಇರುವವನ ಸ್ಥಿತಿಯು ಒಬ್ಬ ಅಮಲುಖೋರನ ಸ್ಥಿತಿಯಂತೆ ಇರುವದು; ಹಾಗೆಯೇ ಸಮಸ್ತ ಪಾಪಿಷ್ಠರ ಸ್ಥಿತಿಯಾಗಿದೆ. ದೇವರ ಆಜ್ಞೆಗಳನ್ನು ಮೀರಿ ನಡೆಯುವವರ ಸ್ಥಿತಿಯು ಇದೇ ರೀತಿಯಾಗಿದೆ. ದೇವರ ಕಡೆಗೆ ಹೋಗುವ ಮಾರ್ಗವು ಒಂದೇ. ಅದನ್ನು ಬಿಟ್ಟವರು ನಾಶನದ ಮಾರ್ಗದಲ್ಲಿರುತ್ತಾರೆಂಬುವದಕ್ಕೆ ಸಂಶಯವಿಲ್ಲ. ದೇವರ ಮಾರ್ಗವನ್ನು ತಪ್ಪಿ ಹೋದವರಿಗೆ ಸುಖವಿಲ್ಲ, ಸಂತೋಷವಿಲ್ಲ, ಮನಸ್ಸಿನಲ್ಲಿ ಸಮಾಧಾನವಿಲ್ಲ. ದೇವರನ್ನು ಬಿಟ್ಟು ಭಕ್ತಿಹೀನರಾಗಿ ಪಾಪದ ಮಾರ್ಗದಲ್ಲಿ ಪ್ರವರ್ತಿಸುವವರೆಲ್ಲರು ನರಕದಲ್ಲಿ ದೊಬ್ಬಲ್ಪಡುವರೆಂದು, ದೇವರ ವಾಕ್ಯದಲ್ಲಿ ಬರದದೆ. ಆದದರಿಂದ ನಾವು ದೇವರ ವಾಕ್ಯವನ್ನು ದಿನಾಲು ಓದಿ, ಅದರ ಪ್ರಕಾರ ನಡದು, ಪಾಪಿಷ್ಠರಿಗೋಸ್ಕರ ಪ್ರಾರ್ಥನೆ ಮಾಡ ಬೇಕು. ಹ್ಯಾಗಂದರೆ: ಓ ದೇವರೇ, ಪಾಪಿಷ್ಠರಿಗೋಸ್ಕರ ತನ್ನ ಜೀವವನ್ನು ಕೊಟ್ಟ ನಮ್ಮ ಕರ್ತನಾದ ಯೇಸು ಕ್ರಿಸ್ತನ ಸಲವಾಗಿ, ನಿನ್ನ ಮಾರ್ಗ

ತಪ್ಪಿ ಹೋದವರಿಗೆ ಮಾನಸಾಂತರ ಕೊಟ್ಟು, ಅವರ ಪಾಪಗಳನ್ನು ಮನ್ನಿಸು; ನಿನ್ನ ಮಾರ್ಗದಲ್ಲಿ ಅವರನ್ನು ನಡಿಸು; ಅದು ಅವರಿಗೆ ತಪ್ಪಿ ಹೋಗದ ಹಾಗೆ ಅವರಿಗೆ ಕೃಪೆ ತೋರಿಸಿ, ಅವರ ಹೃದಯವನ್ನು ಶುದ್ಧ ಮಾಡು; ಮತ್ತು ಅವರನ್ನು ನಿನ್ನ ನಿತ್ಯ ಜೀವಕ್ಕಾಗಿ ಸಿದ್ಧ ಮಾಡು! ಎಂದು, ಹೀಗೆ ಪ್ರಾರ್ಥಿಸ ಬೇಕು.

ಹುಡುಗನೇ, ಪೃಥ್ವಿಯಲ್ಲಿ ಇಷ್ಟು ದುಃಖ ಯಾಕೆ? ಇಷ್ಟು ನಿರಾಶೆ ಯಾಕೆ? ಇಷ್ಟು ಆಪತ್ತು ಯಾಕೆ? ಎಂದು, ಕೇಳಿದರೆ ಹೇಳುತ್ತೇನೆ, ಕೇಳು. ಇವೆಲ್ಲಾ ಪಾಪದ ದೆಸೆಯಿಂದ ಉಂಟಾಗುತ್ತವೆ; ನಿಜ ಮಾರ್ಗ ತಪ್ಪಿದವರ ಗತಿ ಇದೇ. ಹೀಗೆ ನಿನಗೂ ಈ ಹೊತ್ತು ಮಾರ್ಗ ತಪ್ಪಿ ಹೋದದರಿಂದ ದುಃಖವೂ ಕಷ್ಟವೂ ಪ್ರಾಪ್ತಿ ಆಯಿತು; ಅಲ್ಲವೋ ಮಗನೇ? ನಿನ್ನ ಪಾದರಕ್ಷಗಳು ಕೆಸರಿನಲ್ಲಿ ಮುಳುಗಿವೆ, ನಿನ್ನ ಅಂಗಿ ಹರದು ಹೋಗಿದೆ, ಕೈಬೆರಳುಗಳು ಮುಳ್ಳುಗಳಿಂದ ಕೆರೆದು ಹೋಗಿವೆ. ಮಗನೇ, ಈ ನನ್ನ ಉಪದೇಶವನ್ನು ಮನಸ್ಸಿನಲ್ಲಿ ತೆಕ್ಕೊಂಡು, ಇನ್ನು ಮುಂದೆ ಹೀಗೆ ನಡಿಯದೆ, ದೇವರ ಆಜ್ಞೆಯನ್ನು ಕೈಕೊಂಡು, ಸನ್ಮಾರ್ಗದ ವಿಷಯವಾಗಿ ದೇವರ ವಾಕ್ಯದಲ್ಲಿ ಬರದ ನೇಮವನ್ನು ಲಕ್ಷ್ಯಕ್ಕೆ ತಂದು ನಡ

ಕೊಳ್ಳುವಿಯಾದರೆ, ಈ ಅವಸ್ಥಿತಿಯಿಂದ ನಿನಗೆ ದೊಡ್ಡ ಪ್ರಯೋಜನವಾಗುವದು. ದಾರಿ ತಪ್ಪಿ ಹೋಗ ಗೊಡ ಬೇಡ ದೇವರೇ, ಎಂದು, ಮರಣ ಪರ್ಯಂತರ ಪ್ರಾರ್ಥನೆ ಮಾಡಿ, ದೇವರಿಗೆ ಬೇಡಿಕೋ.



# INSTRUCTIVE PARABLES

# ದೃಷ್ಟಾಂತದರ್ಪಣವು

MANGALORE

PRINTED BY STOLZ & REUTHER, BASEL MISSION PRESS

1870

